# ಹಾಡು ಹಬ್ಬ

## ಜನಜಾಗೃತಿ ಹಾಗೂ ಹೋರಾಟದ ಹಾಡುಗಳು



ಸಂಗ್ರಹ :

ಸಂವಾದ ಬಳಗ

# ಹಾಡು ಹಬ್ಬಕ್ಕೆ ಬನ್ನಿ

*-ಜನಾರ್ದನ ಕೆಸರಗದ್ದೆ*

ಹಾಡು ಹಾಡ ಬನ್ನಿ
ಬನ್ನಿರೋ ಹಾಡ ಕೇಳಿ ಬನ್ನಿ || ಹಾಡು ||

ಊರ ಹೊರಗಿದ್ದವರು ಒಳ ಬಂದು ಹಾಡ್ತಾರೆ
ಮೇಲ್ಯಾಕೆ ಕೀಳ್ಯಾಕೆ
ನಿಮ್ಮನ್ನ ಕೇಳ್ತಾರೆ
ಮಡಿ ಮೈಲಿಗೆ ಕಟ್ಟು ಕಟ್ಟಳೆ ತಿಪ್ಪೆಗೆಸೆದು ಬನ್ನಿರೋ || ಹಾಡು ||

ಮನೆಯೊಳಗಿದ್ದವರು
ಹೊರಬಂದು ಹಾಡ್ತಾರೆ
ತಲೆಯ ತಗ್ಗಿಸಿದವರು
ತಲೆ ಎತ್ತಿ ನಿಲ್ತಾರೆ
ರಥದಾ ಚಕ್ರಗಳಾಗಿ ಜೊತೆಯಾಗಿ ಬನ್ನಿರೋ || ಹಾಡು ||

ನೇಗಿಲು ಕುಡುಗೋಲು
ಪೊರಕೆ ಚೌರದ ಕತ್ತಿ
ಬಿಲ್ಲು ಬಾಣಗಳೋ
ಪೆನ್ನು ಪುಸ್ತಕ ಸೌಟು
ಹಿಡಿವಾ ಕೈಗಳಲಿ
ಡೋಲು ತಮಟೆ ತನ್ನಿರೋ || ಹಾಡು ||

ಕರಿಯದು ಕೀಳಲ್ಲ
ಬಿಳಿಯದು ಮೇಲಲ್ಲ
ದೇಶ ಭಾಷೆಯ ಗಡಿಯು
ನಮ್ಮ ಹಾಡಿಗೆ ಇಲ್ಲ
ಮತ ಧರ್ಮದ ಗೋಡೆ ಕೆಡವಿ
ಮನುಜರಾಗಿ ಬನ್ನಿರೋ || ಹಾಡು ||

# ಹಾಡು ಹಬ್ಬ

## ಜನಜಾಗೃತಿ ಹಾಗೂ ಹೋರಾಟದ ಹಾಡುಗಳು




ಸಂಗ್ರಹ :

**ಸಂವಾದ ಬಳಗ**

ಡಿ.ಟಿ.ಪಿ.:

ಶ್ರೀ ಪ್ರಿಂಟ್ ಸಲ್ಯೂಷನ್ಸ್, ಬಸವನಗುಡಿ, ಬೆಂ-4

ಮುದ್ರಣ: ದಿ ಆಫ್‌ಸೆಟ್ಟರ್ಸ್

ಮುಖಪುಟ: ವಿಜಯಕುಮಾರ್ ಎಸ್.

# ಹಾಡುವ ಮುನ್ನ

ಸಂವಾದವು ಎರಡನೇ "ಹಾಡುಹಬ್ಬ" ವನ್ನು ಸಂಘಟಿಸುತ್ತಿರುವ ಈ ಸಂದರ್ಭದಲ್ಲಿ, ಹಬ್ಬದಲ್ಲಿ ಭಾಗವಹಿಸುತ್ತಿರುವವರ ಅನುಕೂಲಕ್ಕಾಗಿ ಹಾಗೂ ಹಾಡುಹಬ್ಬದ ನೆನಪಿಗಾಗಿ ಸಂವಾದ ಬಳಗದ ಎಲ್ಲರು ಸೇರಿ ಸಂಗ್ರಹಿಸಿರುವ ಹಾಡುಗಳನ್ನು ಮುದ್ರಿಸಿದ್ದೇವೆ.

ಇಲ್ಲಿ ಸಾಮಾಜಿಕ ಬದಲಾವಣೆಯ ಆಶಯದೊಂದಿಗೆ ನಮ್ಮನ್ನು, ನಮ್ಮ ವ್ಯವಸ್ಥೆಯನ್ನು ಪ್ರಶ್ನಿಸುವ ನೋವಿನಿಂದ ಸಿಡಿದ ಖಾರದ ನುಡಿಗಳಿವೆ. ಎಲ್ಲವುಗಳಿಗೆ ಮನಸ್ಸನ್ನು ತೆರೆದಿಟ್ಟು ವಿಮರ್ಶಾತ್ಮಕವಾಗಿ ಸ್ವೀಕರಿಸಿ, ಹಾಡುಗಳನ್ನು ಹಾಡಿ.

05-02-2000
ಹಾಡುಹಬ್ಬ, ಬೆಸೆಂಟ್ ಪಾರ್ಕ್
ದೊಡ್ಡಬಳ್ಳಾಪುರ

**ಜನಾರ್ದನ ಕೆಸರಗದ್ದೆ**
ಸಂವಾದ ಬಳಗದ ಪರವಾಗಿ

# ಪರಿವಿಡಿ

# ಕಿರುದನಿ

- ಓದಿನಾ ಬಾತ್ನಾಗ್

ನನ್ನದು ತೀರ ಕಿರುದನಿ
ನನಗಿರುವುದು ಪುಟ್ಟಕನಸು
ನಿಮಲ ಗಾಳಿಯಲಿ ಹೂವಿನ
ನರುಗಂಪು ಹೀರುವ ಕನಸು

ನನ್ನದು ತೀರ ಕಿರುದನಿ
ನನಗಿರುವುದು ಪುಟ್ಟ ಕನಸು
ಸೂರ್ಯನೆಡೆ ಮುಗುಳ್ನಗೆ ಬೀರಿ
ಹಾಡಿ ಕುಣಿವ ಕನಸು
ಎಲ್ಲೆಲ್ಲಿಯೂ ನನ್ನ ಹಾಡು ಹಾಡುವ ಕನಸು

# ಮೇಳ

ಬನ್ನಿ ಈ ಜಗತ್ತಿನ ಪುಟ್ಟ ಪ್ರಜೆಗಳೇ
ನಾವೆಲ್ಲ ಒಂದೇ, ನಾವೆಲ್ಲರೂ ಒಂದೇ
ಬನ್ನಿ ಈ ಜಗತ್ತಿನ ಪುಟ್ಟ ಪ್ರಜೆಗಳೇ....

ನಾವೆಲ್ಲ ಒಂದೇ, ನಾವೆಲ್ಲರೂ ಒಂದೇ
ನಮಗಿರುವುದೊಂದೇ ಆಸೆ
ನಮಗಿರುವುದೊಂದೇ ಕನಸು
ಒಂದೇ ಕೊರಲಿನಲಿ ಹಾಡೋಣ
ಶಾಂತಿ ಕೊಡಿ ನಮಗೆ ಶಾಂತಿ
ಸಮೃದ್ಧಿ, ಸಮೃದ್ಧಿ ಕೊಡಿ
ಇಡೀ ಮನುಜಕುಲಕೆ ಪ್ರೀತಿ

ಶಾಂತಿ ಕೊಡಿ ನಮಗೆ ಶಾಂತಿ
ಸಮೃದ್ಧಿ, ಸಮೃದ್ಧಿ ಕೊಡಿ
ಇಡೀ ಮನುಜಕುಲಕೆ ಪ್ರೀತಿ

(1980ರಲ್ಲಿ ವಿಶ್ವಮಕ್ಕಳ ನಿಧಿಯು ಶಾಂತಿ ವಸ್ತು ಕುರಿತ ಮಕ್ಕಳಿಂದ ಕವನ ರಚನೆಯ ವಿಶ್ವಸ್ಪರ್ಧೆಯನ್ನು ಏರ್ಪಡಿಸಿತ್ತು. ಫಿಲಿಪ್ಪೀನ್ಸ್‌ನ ಪ್ರೌಢಶಾಲಾ ವಿದ್ಯಾರ್ಥಿನಿಯಾದ ಹದಿಮೂರು ವರ್ಷ ವಯಸ್ಸಿನ ಓದಿನಾ ಬಾತ್ನಾಗ್ ಈ ಕವನಕ್ಕೆ ಪ್ರಥಮ ಬಹುಮಾನ ಪಡೆದಳು. ಈ ಕವನವನ್ನು ಇಂಗ್ಲಿಷ್‌ಗೆ ಅನುವಾದಿಸಿ ಸಂಗೀತಕ್ಕೆ ಅಳವಡಿಸಲಾಗಿದೆ.)

# ಚೆಲ್ಲಿದರು ಮಲ್ಲಿಗೆಯಾ

ಚೆಲ್ಲಿದರು ಮಲ್ಲಿಗೆಯಾ । ಬಾನಾ ಸೂರೇರಿ ಮ್ಯಾಲೆ
ಅಂದಾದ ಚಂದಾದ ಮಾಯ್ಕಾರ ಮಾದೇವ್ಗೆ ।
ಚೆಲ್ಲಿದರು ಮಲ್ಲಿಗೆಯಾ

ಮಾದಪ್ಪ ಬರುವಾಗ ಮಾಳೆಲ್ಲಾ ಗಮ್ಮೆಂದಿತೋ
ಹಾಳಾದ ಗರಿಕೆ ಚಿಗಿರ್ಯಾವೋ ಮಾದಪ್ಪ ॥
ಚೆಲ್ಲಿದರು ಮಲ್ಲಿಗೆಯ

ಏಳು ಮಲೆಯಲ್ಲಿ ಏನಯ್ಯ ಕೆಂದೂಳು ॥
ನವಿಲಾಡಿ ನವಿಲ ಮರಿಯಾಡಿ ಮಾದೇವ್ಗೆ ॥
ಚೆಲ್ಲಿದರು ಮಲ್ಲಿಗೆಯ ॥ಚೆಲ್ಲಿದರು॥

ಸಂಪೀಗೆ ಹೂವ್‌ನಂಗೆ । ಗುಂಪಾದೋ ನಿನ ಪರುಷೆ
ಗುಂಪಾದೋ ನಿನ ಪರುಷೆ ಕೌದಳ್ಳಿ ಬೈಲಾಗೆ ॥
ಚೆಲ್ಲಿದರು ಮಲ್ಲಿಗೆಯ

ಕರಿಡಿ ಕೈಯಲ್ಲಿ ತಾಳ । ಹುಲ್ಲಿಯ ಕೈಯಲ್ಲಿ ಮೇಳ
ಏಳೆ ನಾಗನ ಕೈಲಿ ಎಳೆನೀರು । ಎಳೆನಿಂಬೆ
ಚೆಲ್ಲಿದರು ಮಲ್ಲಿಗೆಯ ॥ಚೆಲ್ಲಿದರು॥

ಮಲ್ಲಿಗೂವಿನ ಮಂಚ ಮರುಗಾದ ತಲೆ ಒರಗು
ತಾವರೆ ಹೂವಿನ ತಲೆದಿಂಬು ಮಾದೇವ್ಗೆ
ಚೆಲ್ಲಿದರು ಮಲ್ಲಿಗೆಯ ॥ಚೆಲ್ಲಿದರು॥

ಹೊತ್ತು ಮುಳುಗಿದರೇನೋ ಕತ್ತಲಾದರೇನು
ಅಪ್ಪಾ ನಿನ್ನ ಬಳಿಗೇ ಬರುವೇವು ನಾವು
ಚೆಲ್ಲಿದರು ಮಲ್ಲಿಗೆಯ ॥

# ನ್ಯೂಟ್ರಾನ್ ಬಾಂಬ್

- ರಂಜಾನ್ ದರ್ಗಾ

ನ್ಯೂಟ್ರಾನ್ ಬಾಂಬ್
ನ್ಯಾಟೋ ರಾಷ್ಟ್ರಗಳ ಮುಖವಾಣಿ

ದೊಡ್ಡ ದೊಡ್ಡ ಕಂಪನಿಗಳನ್ನು
ಉದ್ದುದ್ದನೆಯ ಕಟ್ಟಡಗಳನ್ನು
ಹಾಳು ಮಾಡುವುದಿಲ್ಲ ನ್ಯೂಟ್ರಾನ್.

ಕಲ್ಲು ಕಲ್ಲಾಗಿಯೇ ಉಳಿಯುತ್ತದೆ
ಮನುಷ್ಯರು ಮಾತ್ರ ಮಣ್ಣಾಗುತ್ತಾರೆ.

ನಮ್ಮ ನಾಗರೀಕತೆ ಹಾಗೇ ಉಳಿಯುತ್ತದೆ
ಇನ್ನೊಂದು ಸಂಸ್ಕೃತಿ ಬರುವವರೆಗೆ

ನ್ಯೂಟ್ರಾನ್ ಉಸಿರಾಡಿದಾಗೆಲ್ಲ
ನಮ್ಮ ಉಸಿರು ನಿಲ್ಲುತ್ತದೆ.

ನ್ಯೂಟ್ರಾನ್ ನಮ್ಮ ತಲೆ ಸೀಳುವುದಿಲ್ಲ
ಹೊಟ್ಟೆ ಹರಿಯುವುದಿಲ್ಲ
ಅದು ಗೊಬೆಲ್ಸನ ಸತ್ಯದಂತೆ
ನಮ್ಮ ಪ್ರಾಣ ಸವರುತ್ತದೆ.

ನಮ್ಮ ಹೆಣಗಳ ಮೇಲೆ
ವಿಜ್ಞಾನದ ಗೋರಿ ಕಟ್ಟುತ್ತದೆ
ಅದು ನಮ್ಮಿಂದ ಏನನ್ನೂ ಕಸಿದುಕೊಳ್ಳುವುದಿಲ್ಲ
ಚಿಲ್ಲರೆ ಜೀವವೊಂದನ್ನುಳಿದು
ಅದು ಏನನ್ನೂ ಧ್ವಂಸ ಮಾಡುವುದಿಲ್ಲ
ಆದರೆ ತನ್ನ ಮಂಜುದುಟಿಗಳಿಂದ
ನಮ್ಮ ಆತ್ಮಕ್ಕೆ ಮುದ್ದಿಡುತ್ತದೆ.

ಬದುಕಿನ ಮೇಲೆ ಬಲತ್ಕಾರ ಮಾಡುವ
ಚಟಗಾರ್ತಿ, ಈ ನ್ಯೂಟ್ರಾನ್ ರಾಕ್ಷಸಿ
ಸಾಮ್ರಾಜ್ಯಶಾಹಿಗಳ ವಿಷಕನ್ಯೆ.

# ಹಚ್ಚಬ್ಯಾಡ

*- ಕೋಟಗಾನಹಳ್ಳಿ ರಾಮಯ್ಯ*

ಹಚ್ಚಬ್ಯಾಡ ಹಚ್ಚ ಬ್ಯಾಡವ್ವಾ
ಜೀತಕ್ಕ ನನ್ನನ್ನಾ
ಎಳೆ ಬಾಳೆ ಸುಳಿ ನಾನವ್ವಾ ||ಪ||

ಬ್ಯಾಸಿಗಿ ಬಿರುಬಿಸಿಲು ಕೆಂಡಾದ ಧೂಳವ್ವಾ
ಹೂ ಮಾಗಿ ಮುಖ ಕಂದಿ ಅಂಗಾಲು ಸುಡತಾವ
ನೀರಿಲ್ಲಾ ನೆರಳಿಲ್ಲಾ ಕೇಳಾಲಿ ಯಾರನ್ನಾ ||ಪ||

ಗುಡ್ಡಾವ ಹತ್ತಲಾರೆ ಹಳ್ಳಾವ ಇಳಿಯಲಾರೆ
ಮುಳ್ಳೀನ ಹಾದ್ಯಾಗ ಕಳ್ಳೀಯ ಸಾಲಾಗ
ದನಗೋಳ ಬೆನ್ನಾ ಹಿಂದೆ ಅಲೆದಲೆದು ದಣಿಯಲಾರೆ ||ಪ||

ಗಬ್ಬಾದ ಆಕಳು ಅಡವ್ಯಾಗ ಈಯಿತ್ತು
ಎಳೆಗರು ಏಳದೆ ಮಣ್ಣಾಗ ಮಲಗಿತ್ತು
ಹೊರಲಾರದೆ ಹೊತ್ತುಕೊಂಡು
ಮನೆ ತನಕ ತಂದು ಬಿಟ್ಟೆ
ಹೊತ್ತಾಯಿತ್ಯಾಕೆಂದು ಒದ್ದಾನೆ ಮನೆಯೊಡೆಯಾ ||ಪ||

ಸಂಜೆಗತ್ತಲದಾಗ ಹಾದಿತಪ್ಪಿ ನಾನು
ಸಿಗರಿ ಕಂಟ್ಯಾಗ ಹೊಕ್ಕೆ ಮುಳ್ಳು ಬರೆದಾವು ಅವ್ವ
ಬಾಳ್ಯೆಯಾ ಮೈ ತುಂಬಾ ರಗುತಾದ ರಂಗೋಲಿ ||ಪ||

ಹೊಟ್ಯಾಗ ಕೂಳಿಲ್ಲ ರಟ್ಯಾಗ ಕಸುವಿಲ್ಲ
ಅಡವೆಲ್ಲಾ ತಿರುತಿರುಗಿ
ಸೊರಗೀನಿ ನಾನವ್ವ
ಈ ಸುಳಿ ಬಾಡೋ ಬಾಳೆಯ ಬಿಡಬ್ಯಾಡ ಸಾಯಾಕ
ನಿನ್ನ ಸೆರೆಗ ನೆರಳಿರುವಾಗ ತಬ್ಬಲಿ ನಾನ್ಯಾಕ ||ಪ||

ಹಚ್ಚಬಾನೀ ಹಚ್ಚಬಾರವ್ವಾ
ಸಾಲೀಗಿ ನನ್ನನ್ನಾ
ಅಕ್ಷರವಾ ಕಲಿಯಬೇಕವ್ವಾ
ನಾ ಲೋಕವಾ ತಿಳಿಬೇಕವ್ವಾ ||ಪ||

# ನಿತ್ಯೋತ್ಸವ

*- ಕೆ.ಎಸ್. ನಿಸಾರ್ ಅಹ್ಮದ್*

ಜೋಗದ ಸಿರಿ ಬೆಳಕಿನಲ್ಲಿ ತುಂಗೆಯ ತೆನೆ ಬಳುಕಿನಲ್ಲಿ
ಸಹ್ಯಾದ್ರಿಯ ಲೋಹದದಿರ ಉತ್ತುಂಗದ ನಿಲುಕಿನಲ್ಲಿ
ನಿತ್ಯಹರಿದ್ವರ್ಣವನದ ತೇಗಗಂಧ ತರುಗಳಲ್ಲಿ
ನಿತ್ಯೋತ್ಸವ ತಾಯಿ ನಿತ್ಯೋತ್ಸವ
ನಿನಗೆ ನಿತ್ಯೋತ್ಸವ ತಾಯಿ ನಿತ್ಯೋತ್ಸವ
ಆ.............ಆ........... ||ಜೋಗದ||

ಇತಿಹಾಸದ ಹಿಮದಲ್ಲಿನ ಸಿಂಹಾಸನ ಮಾಲೆಯಲ್ಲಿ
ಗತಸಾಹಸ ಸಾರುತಿರುವ ಶಾಸನಗಳ ಸಾಲಿನಲ್ಲಿ
ಓಲೆಗರಿಯ ಸಿರಿಗಳಲ್ಲಿ ದೇಗುಲಗಳ ಭಿತ್ತಿಗಳಲ್ಲಿ
ನಿತ್ಯೋತ್ಸವ ತಾಯಿ ನಿತ್ಯೋತ್ಸವ
ನಿನಗೆ ನಿತ್ಯೋತ್ಸವ ತಾಯಿ ನಿತ್ಯೋತ್ಸವ ||ಜೋಗದ||

ಹಲವೆನ್ನದ ಹಿರಿಮೆಯೇ ಕುಲವೆನ್ನದ ಗರಿಮೆಯೇ
ಸದ್ವಿಕಾಸ ಶೀಲನುಡಿಯ ಲೋಕವೃತ ಸೀಮೆಯೇ
ಈ ವತ್ಸರ ನಿರ್ಮತ್ಸರ ಮನದುದಾರ ಹಿರಿಮೆಯೇ
ನಿತ್ಯೋತ್ಸವ ತಾಯಿ ನಿತ್ಯೋತ್ಸವ
ನಿನಗೆ ನಿತ್ಯೋತ್ಸವ ತಾಯಿ ನಿತ್ಯೋತ್ಸವ ||ಜೋಗದ||

# ಸಾವಿರಾರು ನದಿಗಳು

*- ಡಾ|| ಸಿದ್ಧಲಿಂಗಯ್ಯ*

ನೆನ್ನೆ ದಿನ
ನನ್ನ ಜನ
ಬೆಟ್ಟದಂತೆ ಬಂದರು
ಕಪ್ಪು ಮುಖ ಬೆಳ್ಳಿ ಗಡ್ಡ ಉರಿಯುತ್ತಿರುವ ಕಣ್ಣುಗಳು
ಹಗಲು ರಾತ್ರಿಗಳನ್ನು ಸೀಳಿ ನಿದ್ದೆಯನ್ನು ಒದ್ದರು
ಕಂಬಳಿಗಳು ಕೊರಗಿದವು ಎದ್ದೇಳುವ ರೊಚ್ಚಿಗೆ
ಭೂಕಂಪನವಾಯಿತು ಅವರು ಕುಣಿವ ಹುಚ್ಚಿಗೆ
ಇರುವೆಯಂತೆ ಹರಿವ ಸಾಲು ಹುಲಿ ಸಿಂಹದ ದನಿಗಳು
ದಿಕ್ಕಾರ ದಿಕ್ಕಾರ ಅಸಮಾನತೆಗೆ
ಎಂದೆಂದಿಗೂ ದಿಕ್ಕಾರ ಶ್ರೀಮಂತರ ಸೊಕ್ಕಿಗೆ
ಲಕ್ಷಾಂತರ ನಾಗರಗಳು ಹುತ್ತ ಬಿಟ್ಟು ಬಂದಂತೆ
ಊರ ತುಂಬ ಹರಿದರು
ಪಾತಾಳಕೆ ಇಳಿದರು
ಆಕಾಶಕೆ ನೆಗೆದರು
ಬೀದಿಯಲ್ಲಿ ಗಲ್ಲಿಯಲ್ಲಿ
ಬೇಲಿ ಮೆಳೆಯ ಮರೆಗಳಲ್ಲಿ
ಯಜಮಾನರ ಹಟ್ಟಿಯಲ್ಲಿ ಧಣಿ ಕೂರುವ ಪಟ್ಟದಲ್ಲಿ
ಎಲ್ಲೆಲ್ಲೂ ನನ್ನ ಜನ ನೀರಿನಂತೆ ನಿಂತರು
ಇವರು ಬಾಯಿ ಬಿಟ್ಟೊಡನೆ ಅವರ ಬಾಯಿ ಕಟ್ಟಿತು
ಇವರ ಕಂಠ ಕೇಳಿದೊಡನೆ
ಅವರ ದನಿ ಇಂಗಿತು
ಕ್ರಾಂತಿಯ ಬಿರುಗಾಳಿಯಲ್ಲಿ ಕೈ ಬೀಸಿದ ನನ್ನ ಜನ
ಛಡಿಯ ಏಟು ಹೊಡೆದವರ
ಕುತ್ತಿಗೆಗಳ ಹಿಡಿದರು
ಪೋಲೀಸರ ದೊಣ್ಣೆಗಳು ಏಜೆಂಟರ ಕತ್ತಿಗಳು
ವೇದ ಶಾಸ್ತ್ರ ಪುರಾಣ ಬಂದೂಕದ ಗುಡಾಣ
ತರೆಗೆಲೆ ಕಸ ಕಡ್ಡಿಯಾಗಿ
ತೇಲಿ ತೇಲಿ ಹರಿದವು
ಹೋರಾಟದ ಸಾಗರಕ್ಕೆ
ಸಾವಿರಾರು ನದಿಗಳು

(ಧ್ವನಿಸುರುಳಿ - ನೆತ್ತರಲ್ಲಿ ನೆಂದ ಹೂ)

# ಮುಂದಿನ ಪೀಳಿಗೆಯ ಆಸ್ತಿ

-ಜನಾರ್ದನ ಕೆಸರಗದ್ದೆ

ಈ ಕಾಡು ನಮ್ಮದಲ್ಲ ಈ ಗಾಳಿ ನಮ್ಮದಲ್ಲ
ಹಿರಿಯರಿಂದ ಬಳುವಳಿ ಬಂದುದಲ್ಲ
ಈ ನೀರು ನಮ್ಮದಲ್ಲ ಈ ಮಣ್ಣು ನಮ್ಮದಲ್ಲ
ಕಿರಿಯರಿಂದ ಎರವಲು ಪಡೆದುದು ಎಲ್ಲ ||ಈ ಕಾಡು||

ಭೂಮಿಯನ್ನು ಸೀಳು ಮಾಡಿ ನಂದು ನಿಂದು ಅನ್ನುತ್ತೇವೆ
ಉತ್ತು ಬಿತ್ತು ತಿನ್ನುವುದ ಬಿಟ್ಟು ಹಣಕೆ ಮಾರುತ್ತೇವೆ
ಜಮೀನನ್ನು ಮಾರಲದು ನಮ್ಮದಲ್ಲ
ಅದು ಕಿರಿಯರಿಂದ ಎರವಲು ಪಡೆದುದು ಎಲ್ಲ ||ಈ ಕಾಡು||

ಭೂಮಿಯನ್ನು ತೂತು ಮಾಡಿ ನೀರನ್ನು ದೋಚುತಾರೆ
ಈ ಊರಿಂದಾವೂರಿಗೆ ನೀರನ್ನು ಒಯ್ಯುತಾರೆ
ನೀರನ್ನು ಮಾರಲದು ಅವರದಲ್ಲ
ನೀರು ಮುಂದೆ ಬರುವ ಪೀಳಿಗೆಗೂ ಬೇಕಲ್ಲ ||ಈ ಕಾಡು||

ಕಾಡನ್ನು ಕಡಿದು ಕಡಿದು ಪೇಟೆಗಳ ಕಟ್ಟುತ್ತಾರೆ
ದುಡ್ಡಿಗಾಗಿ ಭೂತಾಯಿಯ ಹಸಿರು ಸೀರೆ ಹರಿಯುತ್ತಾರೆ
ಕಾಡಂತು ಯಾರಪ್ಪನದಲ್ಲವೆ ಅಲ್ಲ
ನಮಗೆ ನಾಳೆಯೂ ಉಸಿರಾಟ ಇರಬೇಕಲ್ಲ ||ಈ ಕಾಡು||

ಕಲ್ಲು ಬಂಡೆ ಕಡಿದು ಕಡಿದು ಕಾಸಿಗಾಗಿ ಮಾರುತ್ತೇವೆ
ಉಸಿರಾಡುವ ಗಾಳಿಗೆ ವಿಷವನ್ನು ತುಂಬುತ್ತೇವೆ
ಪ್ರಕೃತಿಗೆ ವಂಚನೆಯು ಸರಿಯಲ್ಲ
ಹೌದು ನಮ್ಮ ಸಾವು ನಮ್ಮಿಂದಲೇ ಬರಬಾರದಲ್ಲ ||ಈ ಕಾಡು||

ಚಂದ್ರಲೋಕಕೆ ಹೋಗಿ ಸೂರ್ಯನನ್ನು ಸೆರೆ ಹಿಡಿದು
ಸೂರ್ಯಚಂದ್ರ ನಮ್ಮದದು ಎಂದು ನಾವು ಹೇಳಬಹುದು
ಹಾಗನ್ನಲು ಈ ವಿಶ್ವ ನಮ್ಮದಲ್ಲ
ಅದು ಎಲ್ಲ ಜೀವ ಕಾಲಗಳಿಗು ಸೇರಿದುದೆಲ್ಲ ||ಈ ಕಾಡು||

# ಕರಿದೊಗಲ ಹೆಣ್ಣು

*-ಕೋಟಗಾನಹಳ್ಳಿ ರಾಮಯ್ಯ*

ಬಸಿರಲ್ಲಿ ಹೊನ್ನು ಹುದುಗಿಸಿಕೊಂಡ ಈ ಕರಿದೊಗಲ ಹೆಣ್ಣು
ನಿತ್ಯ ವಿರೋಧಾಭಾಸಗಳ ಮೈವೆತ್ತು ನಿಂತು
ದಿನ ದೂಡುತಾಳೆ ಈ ಕರಿದೊಗಲ ಹೆಣ್ಣು

ಕರ್ನಾಟಕದಲಿ ಕಾಲೂರಿದಾ ಕರಿದೊಗಲ ಹೆಣ್ಣು
ದಿನಾ ಮದರಾಸಿನತ್ತ ಕಿವಿ ನಿಮಿರಿಸಿ ನಿಂತ
ಇವಳ ಮಜಬೂತ ಮೈಮಾಟ ಮಾರವಾಡಿಗಳ ಸೊತ್ತು ॥ ಬಸಿರಲ್ಲಿ ॥

ಕಣ್ಣಂಚಿನಲ್ಲಿ ಚಿಗಿಯದಾಸೆಗಳು
ಎದೆಯಲ್ಲಿ ಅದುಮಿಟ್ಟ ಲಾವಾ
ಇಂದಲ್ಲ ನಾಳೆ ...........
ಇವಳು ಚಸ್ನಾಳ ಸೋದರಿ ॥ ಬಸಿರಲ್ಲಿ ॥

(ಧ್ವನಿಸುರುಳಿ - ನೆತ್ತರಲ್ಲಿ ನೆಂದ ಹೂ)

# ಅಣೆಕಟ್ಟು ಕಟ್ಬಲೇ ಬೇಕೇ ?

*-ಡಾ॥ ಸುಮತೀಂದ್ರ, ನಾಡಿಗ್*

ಅಣೆಕಟ್ಟು ಕಟ್ಬಲೇ ಬೇಕೇ ? ದೊಡ್ಡ ಅಣೆಕಟ್ಟು ಕಟ್ಬಲೇ ಬೇಕೆ ?
ಸಾವಿರ ಹಳ್ಳಿ ಮುಳುಗಲೇ ಬೇಕೆ ? ॥ ಪ ॥

ದೊಡ್ಡ ಅಣೆಕಟ್ಟು ಕಟ್ಟುವುದಕ್ಕೆ
ಸಿಮೆಂಟು ಮರಳು ಸಾಗಿಸುವುದಕ್ಕೆ
ಕಾಡುಗಳನ್ನು ಕಡಿದು ಕಡಿದು
ರಸ್ತೆ ಮಾಡಬೇಕೆ ? ರಸ್ತೆ ಮಾಡಬೇಕೆ ?
ಕೂಲಿ ಜನರು ಎಷ್ಟು ವರ್ಷ ಕಾಡಿನ ಗಿಡ ಮರ ಬಳ್ಳಿಯ ಸುಟ್ಟು
ಹಾಳು ಗೆಡವಬೇಕೆ ? ಹಾಳುಗೆಡವ ಬೇಕೆ...............॥ ಪ ॥

ಸುತ್ತ ಗುಡ್ಡಗಳು ಕಾಡು ಸವರಿದರೆ
ಮಣ್ಣಿನ ಸವೆತವು ಹೆಚ್ಚುತ್ತೆ
ಮಳೆಯ ಹೊಡೆತಕ್ಕೆ ಜಾರಿದ ಮಣ್ಣು
ಅಣೆಕಟ್ಟನ್ನೇ ಮುಚ್ಚುತ್ತೆ ?

ಇಂಥ ಅಪರಾಧವ ಮಾಡುವ ಬದಲು
ಸಣ್ಣ ಕೆರೆ ಕುಂಟೆ ಏತದ ಬಾವ ಹೆಚ್ಚಿಸಬಾರದೇ ನಾವು
ಕಡಿಮೆ ಮಾಡಲು ಸಾಧ್ಯವಿಲ್ಲವೆ । ಜನಗಳ ಸಾವು ನೋವು ॥

(ಧ್ವನಿಸುರುಳಿ - ನೆತ್ತರಲ್ಲಿ ನೆಂದ ಹೂ)

# ರೋಗಾ ಬಂದಾತು ಜೋಪಾನ

*- ಗ್ಯಾರಂಟಿ ರಾಮಣ್ಣ*

ರೋಗಾ ಬಂದಾತು ಜೋಪಾನ
ಓ ಅಣ್ಣಯ್ಯಾ ರೋಗಾ ಬಂದಾತು ಜೋಪಾನ

ಮನೆಯ ಒಳಗೆ ಕಿಟಕಿ ಇಲ್ಲ ಗಾಳಿ ಬೆಳಕು ಬೀಳಂಗಿಲ್ಲ
ವಾಸದ ಮನೆಯ ಕೊಟ್ಟಿಗೆ ಮಾಡಿ
ಸೊಳ್ಳೆ ನೊಣ ಎಲ್ಲಾ ಸೇರಿ
ತಿನ್ನುವ ಅನ್ನಕೆ ಸೇರಿಕೊಂಡು ನಿನಗೆ ಕಾಯಿಲೆ ತರ್ತಾವಲ್ಲೊ ||ರೋಗಾ||

ಹೊಲದ ಕೆಲಸ ಮಾಡುತ್ತೀಯಾ
ಕೈಯಾ ಕೆಸರ ಮಾಡ್ಕೋತೀಯಾ
ಹೊತ್ತು ಮೀರಿ ಮನೆಗೆ ಬಂದು
ಕೈಯಾ ತೊಳೆಯದೆ ಉಣ್ಣುತ್ತೀಯಾ
ಮೈ ಕೈ ಗಾಯ ಆದ್ರೆ ನೀನು ಅಮ್ಮ ಅಂತಾ ಪೂಜಿಸ್ತೀಯಾ ||ರೋಗಾ||

ಮಕ್ಕಳು ಮರಿಗೆ ಕಾಯಿಲೆ ಆದ್ರೆ
ಮಾರಮ್ಮನ ಪೂಜಿಸ್ತೀಯಾ
ಆಸ್ಪತ್ರೆಗೆ ಸೇರ್ಸೋದ್ ಬಿಟ್ಟು
ಐನೋರ್ ತಾಯ್ತ ಕಟ್ಟುಸ್ತೀಯಾ
ಕಾಯಿಲೆ ಮೀರಿ ಸತ್ತು ಹೋದ್ರೆ ಹಣೆಬರಹ ಅಂತಾ ಗೋಳಾಡ್ತೀಯಾ ||ರೋಗಾ||

ಬಾಣ್ತಿ ಹೆಂಗಸರು ಬಿಂಕ ಮಾಡಿ
ಹಸುಮಕ್ಕಳನ್ನು ಮರೆಯುತ್ತಾರೆ
ಎದೆಯ ಹಾಲು ಕುಡ್ಸೋದ್ ಬಿಟ್ಟು
ಬಾಯಿಗೆ ಬಾಟ್ಲಿ ತುರುಕುತಾರೆ
ಅಮುಲು ಪೆರೆಕ್ಸ್ ಬೂಸ್ಟ್ ಅಂತ ವೇಸ್ಟ್ ಮಾಡಿ ಕಳೆಯುತ್ತಾರೆ||ರೋಗಾ||

ಊರ ಸುತ್ತಾ ಸ್ವಚ್ಛ ಬೇಕು ಮನೆ ಮುಂದೆ ಗಿಡವ ನೆಡಲೇಬೇಕು
ಶುದ್ಧನೀರ ಕುಡಿಯಲೇಬೇಕು ವಿದ್ಯೆ ಬುದ್ಧಿ ಕಲಿಯಲೇಬೇಕು
ನಿಮ್ಮ ಆರೋಗ್ಯ ನೀವೇ ನೋಡ್ಕೊಂಡು ಆನಂದದಿಂದ ಬಾಳಬೇಕು||ರೋಗಾ||

# ಬೀದಿಮಕ್ಕಳ ಹಾಡು

*- ಜನಾರ್ದನ ಕೆಸರಗದ್ದೆ*

ಇವರು ಬೀದಿ ಮಕ್ಕಳು ಇವರು ಯಾರ ಮಕ್ಕಳು
ಇವರು ಯಾರ ಮಕ್ಕಳು ಇವರು ನಮ್ಮ ಮಕ್ಕಳು

ತಿಳಿಯದೆ ಮಾಡಿದ ತಪ್ಪಿಗಾಗಿ
ಹಗಲು ರಾತ್ರಿ ನೊಂದವರು
ತಪ್ಪಿಗೆ ಸಿಗುವ ಶಿಕ್ಷೆಯ ನೆನೆದು
ಒಳಗಿಂದೊಳಗೆ ಅತ್ತವರು
ತಪ್ಪೋ ಒಪ್ಪೋ ತಿಳಿಯುವ ಮುನ್ನ ತಪ್ಪುಗಾರರೆಂದಾದವರು ॥ ಪ ॥

ಚಿಂದಿಯ ಉಟ್ಟು ಚಿಂದಿಯ ಹೆಕ್ಕಿ
ಚಿಂದಿ ಚಿಂದಿಯಾದವರು
ಹೊಟ್ಟೆಯ ಹಿಟ್ಟಿಗೆ ಭಿಕ್ಷೆಯ ಬೇಡಿ
ಕೆಟ್ಟವರೆನಿಸಿಕೊಂಡವರು
ಸ್ಪರ್ಧೆಯ ಜಗದಲಿ ಸ್ಪರ್ಧಿಸಲಾರದೆ ಹೇಡಿಗಳೆನಿಸಿಕೊಂಡವರು ॥ ಪ ॥

ತಂದೆ ತಾಯಿಯ ಬಡನದಲ್ಲಿ
ಬೆಂದು ಕರಕಲು ಆದವರು
ಕುಡುಕ ತಂದೆಯ ಸಿಟ್ಟಿನ ಏಟನು
ತಾಳದೆ ಅಡಗಿಕೊಂಡವರು
ಎಳೇ ವಯಸಲೇ ತಾಯಿಯ ಪ್ರೀತಿ ಸಿಗದೆ ವಂಚಿತರಾದವರು ॥ ಪ ॥

ಕೊಠಡಿಯ ಒಳಗಿನ ಯಾಂತ್ರಿಕ ಪಾಠ
ಕಲಿಯಲು ಬವಣೆ ಪಟ್ಟವರು
ಕೂಲಿಯ ಮಾಡಲು ಮಕ್ಕಳ ಹಿಡಿಯಲು
ಶಾಲೆಗೆ ಹೋಗದೆ ಉಳಿದವರು
ಕಲಿಸುವ ಮೇಸ್ಟರ ಬೆತ್ತದ ಏಟಿಗೆ ಹೆದರಿ ಶಾಲೆಯ ಬಿಟ್ಟವರು ॥ ಪ ॥

ಆಕಾಶ ಹೊದಿಕೆ ನೆಲವೆ ಹಾಸಿಗೆ ಎನ್ನುತ ನೆಮ್ಮದಿ ಪಡೆದವರು
ರೌಡಿ ಪೋಲೀಸರ ಅಹಂಕಾರಕೆ ಮೈಮನ ನೋಯಿಸಿಕೊಂಡವರು
ಸಾಕಲಾರದ ಸಮಾಜದೊಳಗೆ ಭೂಮಿಗೆ ಭಾರ ಆದವರು ॥ ಪ ॥

# ಇನ್ನೊಂದು ಮುಖ

*-ಜನಾರ್ದನ ಕೆಸರಗದ್ದೆ*

ಈ ಊರಿಗೊಮ್ಮೆ ನೀನು ಬಂದು ನೋಡ
ತಂಗಿ ಮೈಸೂರ ಸೊಬಗ ನೋಡ ಬಾರ ॥

ಅರಮನೆಗಳ ಅಲಂಕಾರ ನೋಡ ಬಾರ
ಇಲ್ಲಿ ಉಳ್ಳವರಿಗೆ ತಿಂದು ಉಂಡು ಹೊಟ್ಟೆ ಬಾರ
ಸಾಲು ಸಾಲು ಜೋಪಡಿಗಳ ನೋಡ ಬಾರ
ಇಲ್ಲಿ ಬಡವರಿಗೆ ಸುಖ ಎಂಬುದು ಬಲು ದೂರ ॥ಪ॥

ದೊಡ್ಡ ದೊಡ್ಡ ಹೊಟೇಲುಗಳ ನೋಡು ಬಾರ
ತ್ರೀಸ್ಟಾರು ಫೈವ್ ಸ್ಟಾರು ಅಂತಾರೆ ನೋಡ
ಸಾಲು ಸಾಲು ಡಬ್ಬಅಂಗಡಿ ನೋಡು ಬಾರ
ಇದು ಹಿಟ್ಟಿಗಾಗಿ ಹೋರಾಟ ಕೇಳು ಬಾರ ॥ಪ॥

ದೂರದಲ್ಲಿ ಚಾಮುಂಡಿ ಬೆಟ್ಟ ನೋಡ
ದೇವರಿಗು ತಾರತಮ್ಯ ಉಂಟು ನೋಡ
ದುಡಿವ ಜನರ ಕಷ್ಟ ಬೆಟ್ಟದಷ್ಟು ನೋಡ
ಇಲ್ಲಿ ದೇವರಿಗು ಕರುಣೆಯೆಂಬುದಿಲ್ಲ ನೋಡ ॥ಪ॥

ಪಕ್ಕದಲ್ಲಿ ಕೃಷ್ಣರಾಜ ಸಾಗರ ನೋಡ
ಅಲ್ಲಿ ಚಿಮ್ಮನೆಂದು ಪುಟಿಯುವ ಕಾರಂಜಿ ನೋಡ
ದೊಡ್ಡವರ ನಾಯಿಗಳಿಗು ಸ್ನಾನವು ನೋಡ
ಇಲ್ಲಿ ಎಲ್ಲರಿಗು ಕುಡಿವ ನೀರು ಇಲ್ಲ ನೋಡ ॥ಪ॥

ಉಳ್ಳವರ ಮಕ್ಕಳ ಆಟ ನೋಡ
ಇಲ್ಲಿ ಚಿಂದಿ ಆಯ್ವ ಮಕ್ಕಳ ಪಾಡ ನೋಡ
ಸಿರಿವಂತರಿಗಿದುವೇ ಸ್ವರ್ಗ ನೋಡ
ಇದು ದುಡಿದುಣ್ಣುವ ಜನರಿಗೆ ನರಕ ನೋಡ ॥ಪ॥

# ಯಾವ ಕುಲ ಯಾವ ಮತ

*-ತೆಲುಗು : ಚೆರಬಂಡರಾಜು*
*ಕನ್ನಡಕ್ಕೆ : ಕೋಟಗಾನ ಹಳ್ಳಿ ರಾಮಯ್ಯ*

ಯಾವ ಕುಲವಯ್ಯ ಯಾವ ಮತವಯ್ಯಾ ॥ ಪ ॥

ಮಣ್ಣು ಕಲಸಿ ಇಟ್ಟಿಗೆ ಮಾಡಿ ಮನೆಯ ಕಟ್ಟಿ ಕೊಟ್ಟಾಗ
ಮೈಯ ಸವೆಸಿ ಉತ್ತು ಬಿತ್ತು ಧಾನ್ಯರಾಶಿ ಹೊತ್ತಾಗ ॥ ಪ ॥

ಒಣ ಶೀಕಲು ತಿಂದು ನಾವು ಸುಣ್ಣ ಬಣ್ಣ ಬಳಿದಾಗ
ನಸುಕಲೆದ್ದು ಬೀದಿ ಗುಡಿಸಿ ಚಂದ ಮಾಡಿ ಇಟ್ಟಾಗ ॥ ಪ ॥

ಮರ ಕಡಿದು ತೊಲೆ ಹೊತ್ತು ಮಂಚ ಮೇಜು ಮಾಡಿದಾಗ
ಖಂಡ ಹಿಂಡಿ ಬಂಡೆ ಹಿಡಿದು ವಿಗ್ರಹಗಳ ಕೆತ್ತಿದಾಗ ॥ ಪ ॥

ಬೆಂಕಿ ಕುಲುಮೆಯಾಗಿ ಹೊಟ್ಟೆ ಮಚ್ಚು ಹಾರೆ ಮಾಡಿದಾಗ
ಕ್ಷಯದಿ ಬಳಲಿ ಕೆಮ್ಮಿ ಕೆಮ್ಮಿ ಇದ್ದಿಲು ಗಣಿಗಿಳಿದಾಗ ॥ ಪ ॥

ದನದ ಕೊರಳ ಕೊಯ್ದು ನಾವು ಕೆರ ಹೊಲಿದು ಕೊಟ್ಟಾಗ
ಹಿಡಿಯಷ್ಟು ಕೂಳಿರದೆ ಮಡಕೆ ಮಾಡಿ ಕೊಟ್ಟಾಗ ॥ ಪ ॥

ಅರಿವನ್ನು ಪಡೆದರೆ ನಡೆಯದಿನ್ನು ಹಳೆಯ ರೂಢಿ
ಓದು ಬರಹ ಕಲಿತರೆ ಓಡೋದಿನ್ನು ರಥದ ಗಾಲಿ
ಕುಲಮತಗಳ ನಡುವೆ ನಿಂತು ಭೇದಗಳ ಛಿದ್ರಗೊಳಿಸಿ
ಬೆವರು ಬಸಿಯೋ ಜನ ನಾವು ಎದೆಯೆತ್ತಿ ನಿಂತರೆ

ಕಟ್ಟುವೆವು ಹೊಸ ನಾಡೊಂದನು ಅಕ್ಷರದಾ ಬೀಡೊಂದನು
ಹೊಸ ನಾಡೊಂದನು ಹೊಸ ಬೀಡೊಂದನು

(ಧ್ವನಿಸುರುಳಿ - ನಕ್ಸಲ್ಬರಿ ನಗಾರಿ)

# ಅಡವಿ ತಾಯಿಗೆ ವಂದನೆ

ಅಡವಿ ತಾಯಿಗೆ ವಂದನೆ ನಮ್ಮ ತಾಯಿ ಅಡವಿಗೆ ವಂದನೆ
ಅಡವಿ ತಣ್ಣಾಗಿದ್ರೆ ಅನ್ನಕ್ಕೆ ಕೊರತೆಯಿಲ್ಲ
ಬೆಳೆಯು ಹಟ್ಟಿಗೆ ಬಂದ್ರೆ ಹಬ್ಬವ ಮಾಡೋಣ

ಬೆಟ್ಟ ಗುಡ್ಡಗಳ ನಟ್ಟ ನಡುವೆ
ಕಾವೇರಿಯು ಹರಿದಾಳೆ ನೋಡು
ಅಂಕು ಡೊಂಕಾಗಿ ವೈಯಾರದಿಂದ
ಅರ್ಕಾವತಿಯು ಹರಿದಾಳೆ ನೋಡು
ಹೊಳೆತೀರ ಬುಗ್ಗೆ ನೋಡು ತಿಳಿ ನೀರ ಕೊಳವ ನೋಡು
ಜೀವ ನದಿಗಳ ಸುತ್ತುಗಟ್ಟಿದ ಗೋಂಡುಗಳ ನಡುಗಡ್ಡೆ ತಮ್ಮ

ಕೋ ಕೋ ಕೋ ಎನ್ನುವ ಕೋಗಿಲೆಯ ಹಾಡು
ಕಿಲ ಕಿಲ ಕಿಲ ಕಿಲ ಕಿಲ ಕಿಲ ಗಿಳಿ ಹಿಂಡಿನ ಕಲರವ
ಪಾರಿವಾಳ ಜೋಡಿ ನೋಡು ಹಾಲು ಹಕ್ಕಿ ಹಾಡು ಕೇಳು
ನವಿಲ ಹಿಂಡು ನಾಟ್ಯ ನೋಡು ಜಿಂಕೆ ಜಿಗಿಯುವ ಚಂದಾ ನೋಡು
ರೇಷ್ಮೆ ಗೂಡು ಅಂದಾ ನೋಡು ಜೇನು ತಂಡದ ಹುಟ್ಟ ನೋಡು
ಎಲ್ಲರ ಬದುಕಿಗೆ ನೆರವಾಗಿ ನಿಂತ
ಅಡವಿ ತಾಯಿಯ ಅಂದವ ನೋಡು
ರೇಲಾ......ರೇಲಾ........ರೇಲಾ.......ರೇಲಾ........

ಬಂಡೆಗಳೆದ್ದು ಬೆಟ್ಟ ನುಂಗುವ ಹೆಬ್ಬಾವುಗಳ ಕೋರೆಯ ನೋಡು
ಬುಸುಗುಟ್ಟುತ ವಿಷ ಕಕ್ಕುವ ಕಾಳಿಂಗ ಸರ್ಪದ ನೋಟವ ನೋಡು
ನಾಗರದ ಹೆಡೆಯ ನೋಡು ಪಟ್ಟೆ ಹಾವ ಪಟ್ಟೆ ನೋಡು
ಹಾವು ಮಾನವ ಕೂಡಿ ಬಾಳುವ
ಅಡವಿ ತಾಯಿಯ ಗುಂಡಿಗೆ ನೋಡು
ರೇಲಾ......ರೇಲಾ........ರೇಲಾ.......ರೇಲಾ........

ಭೀಮ ದೇವ ಜಾಲಿ ದೇವರ
ಜಂಗುಬಾಯಮ್ಮ ತಾಯಿ ನಮ್ಮಮ್ಮ
ನಮ್ಮ ಮಕ್ಕಳ ಮರಿಯ ತಣ್ಣಗೆ ಕಾಪಾಡು
ತಾಯಿ ನಮ್ಮಮ್ಮ ಜಂಗು ಬಾಯಮ್ಮ
ಈಚಲ ಮರದ ಹೆಂಡವ ತಂದು

ಧಾರೆ ಎರೆದು ಕೊಡುವೆವು ತಾಯೆ
ನೀ ಕೋರಿದ ಕೊಬ್ಬಿದ ಹುಂಜವ ತಂದು
ಕುಯ್ದು ಹಾರವ ಕೊಡುವೆವು ತಾಯೆ
ರೇಲಾ......ರೇಲಾ........ರೇಲಾ.......ರೇಲಾ........

(ಧ್ವನಿಸುರುಳಿ - ಅಹಿಂದ)

# ಮಾನವರಾಗೋಣ

- ಜ.ಹೋ. ನಾರಾಯಣಸ್ವಾಮಿ

ಮಾನವರಾಗೋಣ ಬನ್ನಿ ಮಾನವರಾಗೋಣ ॥

ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ
ಹಿಂದು ಮುಸಲ್ಮಾನ್ ಪಾರಸಿ ಕ್ರೈಸ್ತ
ಎಲ್ಲವು ಆಗಿ ಒಡಕಿಗೆ ಸಾಗಿ
ಬದುಕಿದು ಸತ್ತು ಇರುವುದು ಸಾಕು ॥ ಪ ॥

ಅಡ್ಡಗೋಡೆಯನ್ನೊಡೆಯುತ್ತ ನಡೆದು
ಶೋಷಣೆ ಬೇರನ್ನು ಕಿತ್ತು ಎಸೆದು
ಸೋದರರೆಲ್ಲರು ಒಂದಾಗಿ ಕೂಡುತ್ತ
ಸವಿಯನ್ನೆಲ್ಲ ಸವಿಯೋಣ ಬನ್ನಿ ॥ ಪ ॥

ಎಲ್ಲರಿಗಿರಲಿ ನಿಲ್ಲಲು ನೆರಳು
ಎಲ್ಲ ಮಕ್ಕಳಿಗು ಕುಡಿಯಲು ಹಾಲು
ಹಾಸಲು ಹೊದೆಯಲು ಇರಲಿ ಬಟ್ಟೆ
ನೆಮ್ಮದಿ ಉಕ್ಕಲಿ ಎಲ್ಲರಿಗೆಂದೂ ॥ ಪ ॥

ಭೇದವನರಿಯದು ನೀಲಿಯ ಗಗನ
ಒಂದೇ ಮಣ್ಣಿಂದ ಎಲ್ಲರ ಜನನ
ಒಂದೇ ದಿಕ್ಕಿಗೆ ಎಲ್ಲರ ಪಯಣ
ನುಡಿಯಲಿ ಮಿಡಿಯಲಿ ಅಂತಃಕರಣ ॥ ಪ ॥

# ಗುಮ್ಮನ ಕರೆಯದಿರೆ

- ಜನಾರ್ದನ ಕೆಸರಗದ್ದೆ

ಗುಮ್ಮನ ಕರೆಯದಿರೆ
ಅಮ್ಮ ನೀನು ಗುಮ್ಮನ ಕರೆಯದಿರೆ
ಗುಮ್ಮನ ಕರೆಯದಿರು ಎನ್ನನು ಬಯ್ಯದಿರು ||ಗುಮ್ಮನ||

ವರ್ಷವಿನ್ನು ನಾಲ್ಕು ನನಗೆ ಆಗಿಲ್ಲಮ್ಮ
ಎಲ್‌ಕೆಜಿ ಶಾಲೆಗೆ ಕಳಿಸುವೆ ನೀನು
ಶಾಲೆ ಮುಗಿಸಿ ಬಂದು ಆಡಲು ಕುಳಿತರೆ
ಹೋಮ್ ವರ್ಕ್ ಮಾಡೆಂದು ಪೀಡಿಸದಿರು ನನ್ನ ||ಗುಮ್ಮನ||

ಮಣಬಾರದ ಚೀಲ ಹೊತ್ತು ಶಾಲೆಗೆ ಹೋದೆ
ಆಟವಾಡುವ ಕನಸು ಹೊತ್ತು ಮನೆಗೆ ಬಂದೆ
ಕಾಗದದಾ ದೋಣಿಮಾಡಿ ನೀರಲಿ ಬಿಡುವೆ
ಟ್ಯೂಶನ್‌ಗೆ ಹೋಗೆಂದು ಕಾಡಿಸದಿರು ನನ್ನ ||ಗುಮ್ಮನ||

ಊಟ ಮುಗಿಸಿ ನಾನು ಟಿವಿ ನೋಡಲು ಕುಳಿತೆ
ಓದು ಓದು ಓದೆಂದುನೀ ಹಿಡಿದು ಚಚ್ಚಿದೆ ನನ್ನ
ನಿನಗೆ ಬೇಕೆಂದಾಗ ಟಿವಿ ನೋಡುವೆ ನೀನು
ಮೋಗ್ಲಿಯ ಕಥೆಯನ್ನು ಒಮ್ಮೆ ನೋಡುವೆನಮ್ಮ ||ಗುಮ್ಮನ||

ಅಮ್ಮ ಅಳುವುದಿಲ್ಲ ಹಠ ಮಾಡುವುದಿಲ್ಲ
ಎನ್ನ ಬಯ್ಯದಿರಮ್ಮ ದೂರ ಮಾಡದಿರಮ್ಮ
ಎಷ್ಟಾದರೂ ನೀನು ನನ್ನ ಅಮ್ಮನು ತಾನೆ
ಬಳಿಗೆ ಕರೆದು ಒಮ್ಮೆ ಅಪ್ಪಿ ಮುದ್ದಿಸೆ ಬಾರೆ ||ಗುಮ್ಮನ||

# ಮಾಡಿದ್ದುಣ್ಣೊ ಮಾರಾಯ

-ಅಬ್ಬಾಸ್ ಅಬ್ಬಲಗೆರೆ

ಮಾನವ ಓ ನವ ಮಾನವ
ಬರಿ ಸ್ವಾರ್ಥಿಯಾದೆಯಲ್ಲೋ ದಾನವ

ಕಾಡಿಗೆ ಕೊಡಲಿ ಇಟ್ಟು ಬೋಳು ಮಾಡಿದೆ
ವನದೇವಿಯ ಮೇಲೆ ಅತ್ಯಾಚಾರ ನಡೆಸಿದೆ
ಮೋಡ ಚದುರಿದೆ ಮಳೆಯು ಹಾರಿ ಹೋಗಿದೆ
ಬರವು ಬಂದಿದೆ ಭುವಿಗೆ ಬರವು ಬಂದಿದೆ
ಮಾಡಿದುಣ್ಣೊ ಮಾರಾಯ ಗಾದೆ ಮಾತಿದೆ ।।ಮಾನವ।।

ಗಂಗೆಯ ಶೀಲ ಕೆಡಿಸಿ ಮಲಿನ ಮಾಡಿದೆ
ಯುದ್ಧ ಸಾರಿ ಗಾಳಿಯಲ್ಲಿ ವಿಷವ ಬೆರಸಿದೆ
ಸದ್ದು ಗದ್ದಲ ದೊಂಬಿ ಮಾಡಿ ಶಾಂತಿ ಕದಡಿದೆ
ರೋಗ ಬಂದಿದೆ ದಾರುಣ ರೋಗ ಬಂದಿದೆ
ಮಾಡಿದುಣ್ಣೊ ಮಾರಾಯ ಗಾದೆ ಮಾತಿದೆ ।।ಮಾನವ।।

ಭೂತಾಯಿಯ ಎದೆಯ ಕೊರೆದು ಲೂಟಿ ಮಾಡಿದೆ
ಅಚಲಾಚಲ ಹಿಮಾಚಲವು ಕುಸಿಯತೊಡಗಿದೆ
ಹೇಯ ಕೃತ್ಯದಿಂದ ಓಝೋನ್ ಕವಚ ಕರಗಿದೆ
ಬೆಂಕಿ ಬರಲಿದೆ ಧರೆಗೆ ಬೆಂಕಿ ಬರಲಿದೆ
ಮಾಡಿದುಣ್ಣೊ ಮಾರಾಯ ಗಾದೆ ಮಾತಿದೆ ।।ಮಾನವ।।

(ಧ್ವನಿಸುರುಳಿ - ಕಾಲದ ಕೂಗು)

# ಏನಾಯಿತೇನಾಯಿತೋ

-ಕೋಟಗಾನಹಳ್ಳಿ ರಾಮಯ್ಯ

ಏನಾಯಿತೇನಾಯಿತೋ ನಂಬದುಕು
ಹಿಂಗ್ಯಾಕೆ ಗೋಳಾಯಿತೋ

ಹಸಿ ಮೈಯ ಬಾಣಂತಿ ಮೊಲೆ ಕುಡಿವ ಕಂದಮ್ಮ
ಕುಸಿದ ಗೋಡೆಯ ಕೆಳಗೆ ಮಣ್ಣಾದರೋ
ಸುರಿಸುರಿದ ಕಣ್ಣೀರು ಸುರಿಮಳೆಯ ಜೊತೆ ಸೇರಿ
ಕೆಸರು ಕೆನ್ನೀರ ಹೊಳೆಯಾಯಿತೋ
ಇದ್ದವರ ಖುಷಿಗಾಗಿ ಆಡುವ ಆಟಕ್ಕೆ
ನಾವಿದ್ದ ನೆಲವೆಲ್ಲ ಬಯಲಾಯಿತೋ
ಗುಬ್ಬಚ್ಚಿಯಂತೆ ಕಟ್ಟಿದ್ದ ಗೂಡೆಲ್ಲ
ಬುಲ್ಡೋಜರ್ ಪಾದಕ್ಕೆ ಗುಡಿಯಾದವೋ
ಸುಂಟರಗಾಳಿ ಬೀಸಿ ಆರೋಯ್ತು ಸೂರೆಲ್ಲ
ಸೂರ್ಯಚಂದ್ರರ ಜೊತೆ ಸಂಸಾರವೋ
ಸುರಿಮಳೆಯು ಸುರಿವಾಗ ತೆರೆಯಾಯ್ತು ಮನೆಯೆಲ್ಲ
ಕಪ್ಪೆ ಹಾವು ಬಳಗಕ್ಕೆ ತವರಾಯಿತೋ
ಹರಿವ ನೀರಲ್ಲಿ ತೇಲಿ ತೇಲಿ ಹೊದೊ
ನೆಲದಾ ನೆಂಟೆಲ್ಲಾ ಕಡಿಕಡಿದು ಚೆಲ್ಲಿ
ಮಕ್ಕಳು ಮುದುಕರು ಮೊಳಕಾಲು ನೀರಲ್ಲಿ
ಗಡಗಡನೆ ನಡುಗುತ್ತಾ ನಿಂತಾರಲ್ಲೊ ||ಏನಾ||

ನಮ ಮೈಯ ಬೆವರಿಂದ ಎದ್ದಾವೋ ಆ ಭವನ
ನಮ ಕಣ್ಣ ಚಿಗುರಿಂದ ಬೆಳಗ್ಯಾವಲ್ಲೊ
ನಮ ಉಸಿರು ಹೀರೀರಿ ಬಿರಿಬಿರಿದು ಮೊಗ್ಗಾಗಿ
ಹೂವಾಗಿ ನಗುತಾವೆ ಈ ನಗರವು
ಇರುವೆರಡು ಕೈಗಳೆ ನಮಗೀಗ ನೆರಳು
ಬೇಲಿಯ ಮ್ಯಾಗಳ ಹೂವಾದೆವೋ
ಬೇಲಿಯ ಹೂವೆಲ್ಲಾ ಒಂದಾದವೋ ಆವು
ನಾಳೆಗೆ ನಮಗೇನೆ ದಿಕ್ಕಾಗಲು ||ಏನು||

(ಧ್ವನಿಸುರುಳಿ - ಚುನಾವಣೆ ಬಂತು ಚುನಾವಣೆ)

# ಸಾಮಾನ್ಯರೇ ಮೇಲು

*- ಡಾ|| ಹೆಚ್. ಎಸ್. ವೆಂಕಟೇಶಮೂರ್ತಿ*

ಸಾಮಾನ್ಯರೆ ಮೇಲು ಜನ ಸಾಮಾನ್ಯರೆ ಮೇಲು
ಲೋಕದ ಪವಾಡ ಪುರುಷರಿಗಿಂತ ಸಾಮಾನ್ಯರೆ ಮೇಲು
ಜನ ಸಾಮಾನ್ಯರೆ ಮೇಲು

ಪವಾಡ ಪುರುಷ ಮುಷ್ಟಿಯ ತೆಗೆದರೆ ಕಣ್ಣು ಕುಕ್ಕಿತು ಚಿನ್ನ ||
ನಮ್ಮ ತಾಯಿ ತನ್ನ ಅಂಗೈ ತೆರೆದರೆ ಅಂಗೈ ತುಂಬಾ ಅನ್ನ ||ಸಾ||

ಪವಾಡ ಪುರುಷ ಹೂವ ಮುಟ್ಟಿದರೆ ಆದೀತದು ಬ್ರಹ್ಮಾಸ್ತ್ರ ||
ನಮ್ಮ ನೇಕಾರ ಮುಟ್ಟಿದ ಹೂವು ಮಾನ ಕಾಯುವ ವಸ್ತ್ರ ||ಸಾ||

ಪವಾಡ ಪುರುಷ ಮುಟ್ಟಿದ ನೆಲದಲಿ ಅಕ್ಷತೆ ಕುಂಕುಮ ಮಣ್ಣು ||
ನಮ್ಮ ರೈತ ಮುಟ್ಟಿದ ನೆಲದಲ್ಲಿ ಹಸಿರು ಹೂವು ಹಣ್ಣು ||ಸಾ||

ಪವಾಡ ಪುರುಷ ಕೈ ಎತ್ತಿದ್ದರೆ ಆಶೀರ್ವಾದ ಬೂದಿ ||
ಒಕ್ಕಲು ಹೆಣ್ಣು ಕೈ ಎತ್ತಿದರೆ ಜೀರಿಗೆ ಭತ್ತ ಗೋಧಿ ||ಸಾ||

(ಧ್ವನಿಸುರುಳಿ - ಚಿಂತನ)

# ದುಡಿಮೆಯ ಫಲ

*-ಸಮೂಹ ಸೃಷ್ಟಿ*

ನಾವು ಬೆವರನು ಸುರಿಸಿ ದುಡಿವ ಜನ
ನಮ್ಮ ಬೆವರಿನ ಪಾಲನು ಕೇಳುವೆವು
ತುಂಡು ಭೂಮಿಯಲ್ಲ ಒಂದು ದೇಶವಲ್ಲ
ಇಡಿ ಭೂಗೋಳವನೆ ಕೇಳುವೆವು ||ಪ||

ಸಾಗರ ಸಾಗರ ಮುತ್ತುಗಳಿವೆ ಇಲ್ಲಿ
ಪರ್ವತ ಪರ್ವತ ವಜ್ರಗಳು........... ||2||
ಈ ಸಂಪತ್ತೆಲ್ಲಾ ನಮ್ಮದೇ
ಇಡಿ ಖಜಾನೆಯನ್ನು ಕೇಳುವೆವು ||ಪ||

# ಶಾಂತಿ ರಕ್ಷಕರು ನಾವು

- ಸಫ್ದರ್ ಹಷ್ಮಿ

ಶಾಂತಿ ರಕ್ಷಕರು ನಾವು
ನಾವೆಲ್ಲ ಒಂದೇ ನಾವೆಲ್ಲರೂ ಒಂದೇ
ಅನ್ಯಾಯ ದಬ್ಬಾಳಿಕೆಗಳ ಧಿಕ್ಕರಿಸುವವರು
ನಾವ್ ಒಂದೇ

ನಾವು ಕೊರಿಯಾದಲ್ಲಿರುವೆವು
ಹಿಂದೂಸ್ತಾನದಲ್ಲಿ ನಾವಿರುವೆವು
ರಷ್ಯಾ ಚೈನಾ ಜಪಾನಿನಲ್ಲಿ
ಅಮೇರಿಕಾದಲ್ಲಿರುವೆವು, ನಾವು ಇಂಗ್ಲೆಂಡಿನಲಿ
ನಾವು ಇರುವೆವೂ ಜಗದಗಲ
ನಿಜ ಮನುಜರ ಹೃದಯದಲಿ ಸ್ವಾತಂತ್ರ್ಯ
ಪ್ರೇಮಿಗಳು ನಾವು ನಾವೆಲ್ಲ ಒಂದೇ
ನಾವೆಲ್ಲರೂ ಒಂದೇ
ನಾವೆಲ್ಲರೊಂದೇ

ನಾವು ಮುದ್ದು ಕೂಸುಗಳ ಮುಗುಳು
ನಗೆಯನು ಮಾರುವುದಿಲ್ಲ
ನಾವು ಹೆತ್ತ ತಾಯಿಯರ ಎದೆಯ
ಬಯಕೆಗಳ ಮಾರುವುದಿಲ್ಲ
ಆ ಆಟಂ ಬಾಂಬ್ ಸಂಪತ್ತಿನ ಬಜಾರಿನಲಿ
ನಾವು ನರ ಮನುಷ್ಯರ ಪ್ರಾಣಗಳ ಹೀರುವುದಿಲ್ಲ
ಸ್ವಾತಂತ್ರ್ಯ ಪ್ರೇಮಿಗಳು ನಾವು
ನಾವೆಲ್ಲರೂ ಒಂದೇ ನಾವೆಲ್ಲರೂ ಒಂದೇ

ಈ ಕೇರಿಗಳ ಝುಗ ಝುಗಿಸೋಣ ನಾವು ಸದಾ
ಈ ಹೊಲಗದ್ದೆಗಳ ನಳನಳಿಸೋಣ ನಾವು ಸದಾ
ಹಾಡೋಣ ಜೀವನದ ಸುಖಗೀತೆಗಳ
ಸಾವಿಗೆದರೆವು ನಾವು

# ಎದ್ದೇಳಿ ಕಾಲವು ಕರೆಯುತ್ತಿದೆ

- ಕೃಷ್ಣಮೂರ್ತಿ

ಎದ್ದೇಳಿ ಕಾಲವು ಎಲ್ಲರ ಕರೆಯುತ್ತಿದೆ
ಅಂಧಕಾರದ ಸಂಕೋಲೆಯ ಕಿತ್ತೆಸೆಯಿರಿ ಎಂದೂ
ಅಜ್ಞಾನದಮಲಲಿ ಸಾಗುವ ದುರ್ಗತಿ ಬೇಡವೆಂದು
ಬೇಡವೆಂದು ||ಎದ್ದೇಳಿ||

ಸ್ವಾತಂತ್ರ್ಯ ಸಿಕ್ಕರು ನಮಗೆ ಇದೆಂತಹ ದಾಸ್ಯ
ತುತ್ತು ಕೂಳಿಗೂ ಹಲ್ಲುಗಿಂಜುವುದು ಏನಿದು ಹಾಸ್ಯ
ನಮ್ಮೆಲ್ಲರುದ್ಧಾರ ಜ್ಞಾನದಿಂದಲೇ
ವಿಜ್ಞಾನದಿಂದಲೇ ||ಎದ್ದೇಳಿ||

ವಿದ್ಯೆ ಇಲ್ಲದ ಬಾಳು ಬಂಜರು ಭೂಮಿಯ ಹಾಗೆ
ಬದುಕಿ ಸತ್ತ ಈ ಜೀವನ ಸುಡುಗಾಡಿನ ಹಾಗೆ
ಬಾಳು ನಂದನವಾಗುವುದು ಜ್ಞಾನದಿಂದಲೇ
ವಿಜ್ಞಾನದಿಂದಲೇ ||ಎದ್ದೇಳಿ||

ಹಣೆಬರಹ ಎಂಬದು ಸೋಮಾರಿಯ ಸೋಗು
ಏಳಿ ಎದ್ದೇಳಿ ಕೇಳಿರಿ ಕಾಲದ ಕೂಗು
ಸಾರ ಬನ್ನಿರಿ ಸಮರ ಜ್ಞಾನದಿಂದಲೇ
ವಿಜ್ಞಾನದಿಂದಲೇ ||ಎದ್ದೇಳಿ||

(ಧ್ವನಿಸುರುಳಿ - ಕಾಲದ ಕೂಗು)

# ಡೆಲ್ಲಿಯಲಿ ಸರಕಾರದ ಜೋರು

ಡೆಲ್ಲಿಯಲಿ ಸರಕಾರದ ಜೋರು
ಈ ಹಳ್ಳಿಯಲಿ ಸೂರಿಲ್ಲದ ಗೋಳು
ಓಟು ಕದ್ದು ಸೀಟಿಗೋದ ಚೋರ
ಈ ಬಡಬಗ್ಗರ ಬದುಕ ನೋಡಬಾರ

ಭಾರತದೇಶದಲ್ಲಿ ಅಣ್ಣ ತಮ್ಮಂದಿರೆ
ಬತ್ತಿ ಹೋದ ಬದುಕಿನಲ್ಲಿ ಅಕ್ಕ ತಂಗಿಯರೆ
ಕರುಳು ಒಣಗಿದ ಬದುಕ
ರಕ್ತ ಸುರಿಸಿದರತ್ತ
ರಾಜಕೀಯ ಬೀಸಿದಾಗ ಬಾಡಿ ಹೋದ ಬದುಕಯ್ಯ ||ಡೆಲ್ಲಿ||

ಒಡೆಯರ ಹೊಲ ಗದ್ದೆಗಳಲ್ಲಿ
ಬೆವರು ಸುರಿಸಿ ಸತ್ತೆವೆಲ್ಲ
ಏಳಂತಸ್ತಿನ ಮಹಡಿಗೆ
ಹಗಲು ಇರುಳು ದುಡಿದೆವಲ್ಲ
ಸಿರಿವಂತರು ಸಿಡುಕಿದಾಗ ನಮ್ಮ ಬಾಳು ಮಸಣದಾಗ || ಡೆಲ್ಲಿ ||

ಗಲ್ಲಿಗೊಂದು ಆಫೀಸು
ಬೀದಿಗೊಂದು ಪಾರ್ಟಿ ಗುರುತು
ಹಸ್ತ ಚಕ್ರಕಮಲದ ಹೂ
ಪ್ರಣಾಳಿಕೆಗಳ ಬರವಾಸೆ
ಕೆಂಪು ಕೋಟೆ ಮೇಲೆ ಕುಳಿತು ಕಣ್ಣು ಕಿವಿ ಮುಚ್ಚಿಕೊಂಡು ||ಡೆಲ್ಲಿ||

ಇದು ವರ್ಷಕೊಂದು ಬಾರಿ
ಬುರ್ರೆಂದು ಕಾರು ಬಂದು
ಭಾಷಣಗಳ ಸರದಾರರು
ಭಾಷಣಗಳ ಮಾಡಿ ಅವರು
ಸಾರಾಯಿ ನಿನಗೆ ಕೊಟ್ಟು ಸರಕಾರ ಬರೆಸಿಕೊಂಡು ||ಡೆಲ್ಲಿ||

ಕಾರ್ಮಿಕ ನೀ ಕೇಳಯ್ಯ
ರೈತ ನೀ ಏಳಯ್ಯ
ದೇಶದ ರಕ್ಷಕರು ನಾವು
ಸಿಂಹಾಸನ ನಮ್ಮದೇನೇ
ದಗಲುಬಾಜಿಗಳಂತವರು
ರಾಷ್ಟ್ರದ ರಣಹದ್ದುಗಳು ||ಡೆಲ್ಲಿ||





# ಅವನು-ಅವಳು

*-ಜನಾರ್ದನ ಕೆಸರಗದ್ದೆ*

ಆಕೆಗೊಂದು ತರ ಅವನಿಗೊಂದು ತರ ಯಾಕೆ ಮಾಡಿದರೋ ಕಾಣೆ
ಯಾಕೆ ಮಾಡಿದರೊ ಕಾಣೆ ಇದನ ಯಾರು ಮಾಡಿದರೊ ಕಾಣೆ

ಅವನು ಗಂಡಸು ಕೈಯಲಿ ಪೊರಕೆ ಹಿಡಿಯಬಾರದಂತೆ
ಅವಳು ಹೆಂಗಸು ಮರವನು ಎಂದು ಹತ್ತಬಾರದಂತೆ

ಅವನು ಗಂಡಸು ಅಡಿಗೆ ಮನೆಗೆ ಹೋಗಬಾರದಂತೆ
ಇವಳು ತಲೆಯನು ಎತ್ತಿ ನಡೆಯಬಾರದಂತೆ

ಅವನು ಗಂಡಸು ನೋವು ಆದರೂ ಅಳಬಾರದಂತೆ
ಇವಳು ಹೆಂಗಸು ಜೋರು ಜೋರಾಗಿ ನಗಬಾರದಂತೆ

ಅವನು ಗಂಡಸು ದಡ್ಡನಾದರೂ ಓದಲೇಬಾರದಂತೆ
ಇವಳು ಹೆಂಗಸು ರ್‍ಯಾಂಕ್‌ಬಂದರೂ ಶಾಲೆ ಸಾಕಂತೆ

ಅವನು ಗಂಡಸು ನಾಚಿಕೆಯಾದರೂ ನಾಚಬಾರದಂತೆ
ಅವಳು ಹೆಂಗಸು ಜೋರಾಗಿ ಸಿಳ್ಳೆ ಹಾಕಬಾರದಂತೆ

ಅವನು ಗಂಡಸು ಹೊಟ್ಟೆ ತುಂಬಾ ಉಣ್ಣಬಹುದಂತೆ
ಎಲ್ಲರ ಊಟ ಆದ ಮೇಲೆ ಅವಳ ಊಟವಂತೆ

ಹತ್ತು ಹೆಂಗಸರ ಜೊತೆ ಮಲಗಿದರು ಅವನು ರಸಿಕನಂತೆ
ಎರಡು ಗಂಡಸರು ಮುತ್ತು ಕೊಟ್ಟರೂ ಅವಳು ಸೂಳೆಯಂತೆ

(ಹಾಡು ಹಬ್ಬ - ಸಪ್ಟೆಂಬರ್ 1998)

# ಮಾದಿಗನೇ ಮಾತಾಡು

-ಶಂಕರ ಮಾಸ್ತರ
ಮಾದಿಗ ಕಲಾಮಂಡಳಿ, ರಾಯಚೂರು

ಮಾದಿಗನೇ ಮಾತಾಡು । ಪಾಲುಹಂಚಿಕೆಗೆ ಹೋರಾಡು ॥
ಹೊಲೆಯನೇ ನೀನೋಡು । ಪಾಲುಹಂಚಿಕೆಯಲ್ಲಿ ದನಿಗೂಡು ॥
॥ ಮಾದಿಗನೇ ॥

ಜಾತಿ ತುಳಿತ ಜನಾಂಗದಲ್ಲಿ । ಅತ್ಯಂತ ಕೆಳಸ್ತರದ ಅಸ್ಪೃಶ್ಯರಲ್ಲಿ
ದೊಡ್ಡ ಸಮೂಹ ನೀನು । ದೊಡ್ಡಸೇವೆ ನಿನ್ನದು ।
ನಿನ್ನ ಹಕ್ಕು ದೊಡ್ಡಪಾಲಿಗಾಗಿ ಮಾತಾಡೋ ಹೋರಾಡೋ ॥
॥ ಮಾದಿಗನೇ ॥

ಮೀಸಲಾತಿಗೆ ಮಾನದಂಡ । ಅಸ್ಪೃಶ್ಯತೆ ಕರ್ಮಕಾಂಡ
ಅಸ್ಪೃಶ್ಯರ ನ್ಯಾಯಕ್ಕಾಗಿ । ಹದಿನೈದು ಪರ್‌ಸೆಂಟ್ ಮೀಸಲಾತಿ
ಹೊಲೆಯ ಗಿಲೆಯ ಮಾದಿಗರೆ । ಮೀಸಲಾತಿಗೆ ವಾರಸುದಾರರು
ಓಟಿಗಾಗಿ ನೀಚ ರಾಜಕಾರಣ । ನೂರೆಂಟು ಜಾತಿ ಪಟ್ಟಿಮಾಡಿತು ।
ಯಾರು ಅಸ್ಪೃಶ್ಯರೋ ? ಯಾರು ಸ್ಪೃಶ್ಯರೋ ? ॥
ಯಾರದೋ ಅನ್ನ । ಯಾರೋ ತಿನ್ನುವರು
ನಿಜವಾದವರಿಗೆ ನೆಲೆಯೇ ಇಲ್ಲ । ಮಾತಾಡೋ ಮಾತಾಡು ॥
॥ ಮಾದಿಗನೇ ॥

ನೀನು ಕೇಳುವ ಪಾಲು ಭಾಗ । ಸಿಗಬೇಕಾದ ಜನ್ಮಸಿದ್ಧ ಹಕ್ಕು
ಸಹಜಾತಿ ಹೊಲೆಯರು ಗಿಲೆಯರು । ಮೀಸಲಾತಿ ಪಾಲುದಾರರು
ಅಣ್ಣನ ಪಾಲು ಅಣ್ಣನಿಗಯ್ಯ । ತಮ್ಮನ ಪಾಲು ತಮ್ಮನಿಗಯ್ಯ
ಅಣ್ಣ ತಮ್ಮ ಪಾಲುಹಂಚಿಕೆಯಲ್ಲಿ । ಜಗಳ ಜೂಟಿ ಬೇಡವಯ್ಯಾ
ಆಂದ್ರದ ಅಣ್ಣ ತಮ್ಮಂದಿರು । ಮೀಸಲಾತಿ ಆಂದೋಲನ ಮಾಡಿ
ಎ.ಬಿ.ಸಿ.ಡಿ. ಹಂಚಿಕೆ ಪಡೆದರು । ಸಂಖ್ಯೆಗೆ ತಕ್ಕ ಹಕ್ಕು ದೊರಕಿತು
ಸಂಖ್ಯೆಗೆ ತಕ್ಕ ಹಕ್ಕು ಪಡೆಯಲು । ಸಂಘರ್ಷವನ್ನು ಮಾಡಲೇಬೇಕು ॥
॥ ಮಾದಿಗನೇ ॥

ಜಾತಿ ಸಮಾಜ ಭಾರತದಲ್ಲಿ । ಬಾಬಾ ಸಾಹೇಬರ ಹೋರಾಟದಲ್ಲಿ
ಪ್ರತ್ಯೇಕ ಮತದಾನ । ಪ್ರತ್ಯೇಕ ವಾಸಸ್ಥಾನ
ಪ್ರಮುಖವಾದ ಹಕ್ಕೊತ್ತಾಯದಲ್ಲಿ ।
ದಕ್ಕಿದ್ದು ಮಾತ್ರ ಸ್ಥಾನ ಮೀಸಲಾತಿ
ಸಿಕ್ಕಿದ್ದನ್ನು ಪಡೆಯುವುದಕ್ಕಾಗಿ । ರಿಸರ್ವೇಶನ್ ಇಂದಿನ ಹೋರಾಟ
ಸಿಗದಿರುವುದ ಪಡೆಯುವುದಕ್ಕಾಗಿ । ರಾಜಕೀಯ ಮುಂದಿನ ಹೋರಾಟ
ಮಾತಾಡೋ ಮಾತಾಡು ॥ ಮಾದಿಗನೇ ॥

# ಅಗೋ ಬಂದರು

*(ದಲಿತ-ಮಹಿಳಾ ಚಳುವಳಿ)*

ಅಗೋ ಬಂದರು ನನ್ನ ಜನಗಳು
ಬರಿಗಾಳಿಯಲ್ಲ ಬಿರುಗಾಳಿ || 2 ||

ಅವರು ಬಂದರು ಕುಣಿಕುಣಿಯುತ
ಕಡಲ ಅಬ್ಬರದ ಸದ್ದು ಮಾಡುತ
ಸೊಕ್ಕಿ ನಿಂತವರ ಗರ್ವ ಮುರಿಯುತ ||

ಭಾರತ ಒಂದು ಸುಡುಗಾಡು
ನಮಗೆಲ್ಲಿದೆ ಇಲ್ಲಿ ಸಮಪಾಲು
ನೋವಲಿ ತುಂಬಿದೆ ನಮ್ಮ ಬಾಳು
ರಾಜಕೀಯ ಜಾತಿವಂತರದೋ
ಅಧಿಕಾರ ಮೂಲ ಗಂಡಸರದೋ
ಈ ದೇಶವೇ ಬಾಬಾನಂತವರದೋ ||

ಸಿಡಿಯಿತು ಘೋಷಣೆ ಮಾರ್ದನಿಯಲ್ಲಿ
ಹುಲಿಗಳು ನಾವು ನುಗ್ಗಿರಿ ಮುಂದೆ
ಘೋಷಣೆ ಸಾಗಿತು ದೂರ ದೂರ ದಿಗಂತದೀ ||

ಮೊಳಗಿತು ಎಲ್ಲೆಡೆ ಕೆಂಡದ ಕೂಗು
ಅಲುಗದ ಬಂಡೆಯ ಗುಂಡಿಗೆ ತಾಗಿ
ಗಡ ಗಡ ನಡುಗಿತು ದಶದಿಕ್ಕೂ ||

ಕೂಗಿರಿ ಎಲ್ಲ ಒಕ್ಕೊರಲಲ್ಲಿ
ಟಮಟಮ ಸದ್ದಿನ ಸಂಗಮದಲ್ಲಿ
ದಲಿತರೆ ದೇಶದ ನಾಯಕರು
ನಾವೇ ಭಾರತ ನಾಯಕರು ||

# ದುಡಿಯೋರ ಹಾಡು

- ದಲಿತ-ಮಹಿಳಾ ಚಳುವಳಿ

ಹಾಡಲಾಕ ಹಾಡ್ನ
ನಮ್ಮೋರ ಹಾಡ್ನ
ದುಡಿಯೋರ ಹಾಡ್ನ

ನೋವು ನಂಗೋರ ಹಾಡ್ನಾ
ಸಿಟ್ನ ಬಿಟ್ಟೋರ ಹಾಡ್ನಾ ॥ ಅರೆರೆರೆ..ಹಾ ॥

ಭೂಮೀನ ನಂಬಿದೋರು ನಮ್ಮ ಜನರು
ಬೆಳೆಯನ್ನು ಬೆಳೆಯೋರು ನಮ್ಮ ಜನರು
ಅನ್ನವನ್ನು ನೀಡೋರು ನಮ್ಮ ಜನರು
ತಿನ್ನಾಕಿಲ್ದೇ ಸತ್ತರಲ್ಲೋ ನಮ್ಮ ಜನರು ॥ ಹಾಡಲಾನ ॥

ಗಾರೆಕೆಲ್ಸ ಮಾಡಿದೋರು ನಮ್ಮ ಜನರು
ಮಣ್ಣು ಮಂಕ್ರಿ ಹೊತ್ತಿದೋರು ನಮ್ಮ ಜನರು
ರೇಶಿಮೆ ಸಾಕಿದೋರು ನಮ್ಮ ಜನರು
ಹತ್ತಿಯನ್ನು ಬಿತ್ತಿದೋರು ನಮ್ಮ ಜನರು
ಬಟ್ಟೆಯನ್ನು ಮಾಡಿದೋರು ನಮ್ಮ ಜನರು
ಬೆತ್ತಲಾಗೆ ಹೋದರಲ್ಲೋ ನಮ್ಮ ಜನರು ॥ ಹಾಡಲಾನ ॥

ಊರನ್ನು ಕಟ್ಟಿದೋರು ನಮ್ಮ ಜನರು
ಊರಸೇವೆ ಮಾಡಿದೋರು ನಮ್ಮ ಜನರು
ಬೆವ್ರು ಸುರ್ಸಿ ದುಡಿಯೋರು ನಮ್ಮ ಜನರು
ಕತ್ತಲಾಗೆ ಬಿದ್ದರಲ್ಲೋ ನಮ್ಮ ಜನರು ॥ ಹಾಡಲಾನ ॥

ಪಂಚಾಯ್ತಿ ಸೇರಿಕೊಂಡು ನಮ್ಮ ಜನರು
ಪಾಳೆಗಾರ್ರಿಗೆ ಶರಣಾದ್ರು ನಮ್ಮ ಜನರು
ಸ್ವಾಭಿಮಾನ ಕಳ್ದುಕೊಂಡ್ರು ನಮ್ಮ ಜನರು
ಅಧಿಕಾರ ಬಿಟ್ಟರಲ್ಲೋ ನಮ್ಮ ಜನರು ॥ ಹಾಡಲಾನ ॥

# ಓ ಬನ್ನಿ ಸೋದರರೆ ಬೇಗ ಬನ್ನಿ

-ಕುವೆಂಪು

ಗುಡಿ ಚರ್ಚು ಮಸಜೀದಿಗಳ ಬಿಟ್ಟು ಹೊರಬನ್ನಿ
ಬಡತನದ ಬುಡಮಟ್ಟ ಕೀಳಬನ್ನಿ
ಮೌಢ್ಯತೆಯ ಮಾರಿಯನು ಹೊರದೂಡಲೈತನ್ನಿ
ವಿಜ್ಞಾನ ದೀವಿಗೆಯ ಹಿಡಿದು ಬನ್ನಿ
ಓ ಬನ್ನಿ, ಸೋದರರೆ ಬೇಗ ಬನ್ನಿ ।

ಸಿಲುಕದಿರಿ ಮತವೆಂಬ ಮೋಹದಜ್ಞಾನಕ್ಕೆ
ಮತಿಯಿಂದ ದುಡಿಯಿರೈ ಲೋಕಹಿತಕೆ
ಆ ಮತದ ಈ ಮತದ ಹಳೆಮತದ ಸಹವಾಸ
ಸಾಕಿನ್ನು ಸೇರಿರೈ ಮನುಜಮತಕೆ
ಓ ಬನ್ನಿ ಸೋದರರೆ ವಿಶ್ವಪಥಕೆ

(ಧ್ವನಿ ಸುರುಳಿ - ಅನಿಕೇತನ)

# ತರುಣರಿರ ಎದ್ದೇಳಿ

-ಕುವೆಂಪು

ಹೋಗುತಿದೆ ಹಳೆ ಕಾಲ, ಹೊಸ ಕಾಲ ಬರುತಲಿದೆ.
ಬರುತಲಿದೆ ಹೊಸದೃಷ್ಟಿ ಹೊಸ ಬಯಕೆಗಳಲಿ
ಹೋಗುತಿದೆ ಹಳೆಬಾಳು, ಹೊಸಬಾಳು ಬರುತಲಿದೆ
ಬರುತಲಿದೆ ಕುದಿಗೊಂಡು ತರುಣರೆದೆಗಳಲಿ
ತರುಣರಿರ ಎದ್ದೇಳಿ, ಎಚ್ಚರಗೊಳ್ಳಿ, ಕೇಳಿ !

ಹಳೆ ಮತದ ಕೊಳೆಯಲ್ಲ ಹೊಸಮತಿಯ ಹೊಳೆಯಲ್ಲಿ
ಕೊಚ್ಚಿ ಹೋಗಲಿ ; ಬರಲಿ ವಿಜ್ಞಾನಬುದ್ಧಿ
ವೇದಪ್ರಮಾಣತೆಯ ಮರುಮರೀಚಿಕೆಯಲ್ಲಿ
ನೀರಡಸಿ ಕೆಡದಿರಲಿ ಸ್ವಾತಂತ್ರ್ಯ ಸಿದ್ಧಿ
ತರುಣರಿರ ಎದ್ದೇಳಿ, ಎಚ್ಚರಗೊಳ್ಳಿ, ಬಾಳಿ !

ಹೊಸಬಾಳಗೀತೆಯನು ದಿಕ್ಕುದೆಸೆ ಬಿರಿವಂತೆ
ಕೊರಳೆತ್ತಿ ಕೈ ಎತ್ತಿ ದನಿಯೆತ್ತಿ ಹಾಡಿ.
ಸೇರಿನಡೆದರೆ ನಿಮ್ಮ ತಡೆಯುವವರಾರಿಲ್ಲ
ಜಗವೆ ಹಿಂಜರಿಯುವುದು ನಿಡುದಾರಿ ನೀಡಿ
ತರುಣರಿರ ಎದ್ದೇಳಿ, ಎಚ್ಚರಗೊಳ್ಳಿ, ಮೂಡಿ!

(ಧ್ವನಿ ಸುರುಳಿ - ಅನಿಕೇತನ)

# ಏಳವ್ವ ನಿಂಗವ್ವ

- ಗ್ಯಾರಂಟಿ ರಾಮಣ್ಣ

ಏಳವ್ವ ನಿಂಗವ್ವ
ನಾವೆಲ್ಲ ಕಲಿಯೋಣ ಬಾರವ್ವ ॥

ಅನ್ನಾ ಬೆಳೆಯೋ ದೇಶದಲ್ಲಿ
ಕನ್ನಾ ಹಾಕೋರು ಬಂದಾವರವ್ವ
ನಿನ್ನೆ ಮೊನ್ನೆ ಬಂದೋರೆಲ್ಲಾ
ಪೆನ್ನಾ ಹಿಡ್ಕೊಂಡು ಕುಂತಾರವ್ವ ॥ ಪ ॥

ಬೆಳಿಗ್ಗೆ ಎದ್ದು ಬಾಗಿಲು ಸಾರ್ಸಿ
ಕೋಣೇಲಿ ಕುಂತ್ಕೊಂಡು ಕಸವ ಕೆರೆದೆ
ಓದಾಕ್ ಬರೆಯಾಕ್ ಬರದೆ ನೀನು
ತಲೆಯಾ ಮೇಲೆ ಕೈಯಾ ಹೊತ್ತೆ ॥ ಪ ॥

ಪ್ರಾಣಿಗಳಂತೆ ವ್ಯಾಪಾರ ಮಾಡಿ
ವರದಕ್ಷಿಣೆಯ ಕೇಳ್ತಾರವ್ವ
ಮಾನವ ಧರ್ಮವ ಮರೆತು ಬಿಟ್ಟು
ಜೀವಂತವಾಗಿ ಸುಡ್ತಾರವ್ವ ॥ ಪ ॥

ಯಾರಿಗೆ ನಾವು ಕಡಿಮೆ ಹೇಳು
ಅವರಿಗೆ ಬುದ್ಧಿ ಕಲಿಸೋಣವ್ವ
ಕಾನೂನು ಖಟ್ಲೆ ತಿಳ್ಕೊಂಡು ನಾವು ಎಲ್ಲಾರಂಗೆ ಬಾಳೋಣವ್ವ ॥ ಪ ॥

# ಯಾರಿಗೆ ಬಂತು ಸ್ವಾತಂತ್ರ್ಯ

- ಡಾ.ಸಿದ್ಧಲಿಂಗಯ್ಯ

ಯಾರಿಗೆ ಬಂತು ಎಲ್ಲಿಗೆ ಬಂತು ನಲ್ವತ್ತೇಳರ ಸ್ವಾತಂತ್ರ್ಯ
ಟಾಟಾ ಬಿರ್ಲಾರ ಜೇಬಿಗೆ ಬಂತು
ಜನಗಳ ತಿನ್ನುವ ಬಾಯಿಗೆ ಬಂತು
ಕೋಟ್ಯಾಧೀಶರ ಕೋಣೆಗೆ ಬಂತು
ನಲ್ವತ್ತೇಳರ ಸ್ವಾತಂತ್ರ್ಯ

ಬಡವರ ಮನೆಗೆ ಬರಲಿಲ್ಲ
ಬೆಳಕಿನ ಕಿರಣ ತರಲಿಲ್ಲ
ಗೋಳಿನ ಕಡಲನು ಬತ್ತಿಸಲಿಲ್ಲ
ಸಮತೆಯ ಹೂವನು ಅರಳಿಸಲಿಲ್ಲ
ಹಣವಂತರು ಸೇರಿ ಕೈ ಸನ್ನೆ ಮಾಡಿದರೆ
ಕತ್ತಲೆಯಲ್ಲಿ ಬೆತ್ತಲೆಯಾಯಿತು ಸ್ವಾತಂತ್ರ್ಯ
ನಲ್ವತ್ತೇಳರ ಸ್ವಾತಂತ್ರ್ಯ

ಪೋಲೀಸರ ಲಾಠಿಗೆ ಬಂತು
ಮಾಲೀಕರ ಚಾಟಿಗೆ ಬಂತು
ಬಂದೂಕದ ಗುಂಡಿದೆ ಬಂತು
ನಲ್ವತ್ತೇಳರ ಸ್ವಾತಂತ್ರ್ಯ

ಪಾರ್ಲಿಮೆಂಟಿನ ಕುರ್ಚಿಯ ಮೇಲೆ
ವರ್ಷಗಟ್ಟಲೆ ಬೆಚ್ಚಗೆ ಕೂತು
ಬಡ್‌ವರ ಬೆವರಿನ ರಕ್ತವ ಕುಡಿದು
ಏಳಲೇ ಇಲ್ಲ ಸ್ವಾತಂತ್ರ್ಯ
ನಲ್ವತ್ತೇಳರ ಸ್ವಾತಂತ್ರ್ಯ

# ಬಾಲ ಕಾರ್ಮಿಕರ ಹಾಡು

-ಜನಾರ್ದನ ಕೆಸರಗದ್ದೆ

ದೇಹ ಮನಸ್ಸು ಬೆಳೆಯುವ ಮೊದಲೇ
ಕೂಲಿಯ ಮಾಡಲು ಹೊರಟವರೇ
ವರ್ಷವು ಹದಿನಾಲ್ಕು ತುಂಬುವ ಒಳಗೆ
ಅಪಾಯಗಳನು ಕಂಡವರೇ
ಹೆದರದಿರಿ ನಿಮ್ಮೊಡನೆ ನಾವು ಇದ್ದೇವೆ

ಬೀಡಿಯ ಕುಡಿಯುವ ಜನರ ಮೋಜಿಗೆ
ಬೀಡಿಯ ಸುತ್ತಿ ಕೊಟ್ಟವರೇ
ಕೆಲವರ ಬೊಕ್ಕಸ ತುಂಬಲಿಕಾಗಿ
ಕಡ್ಡಿಯ ಉಜ್ಜಿ ಇತ್ತವರೇ
ಎಳೆಯ ವಯಸಲೇ ಕಾಯಿಲೆ ಬಿದ್ದು ಬೇಗನೇ ಮುಪ್ಪನ್ನು ಪಡೆದವರೇ...
ಹೆದರದಿರಿ ನಿಮ್ಮೊಡನೆ ನಾವು ಇದ್ದೇವೆ

ಸುಡುವ ಬಿಸಿಲಲಿ ಸುರಿವ ಮಳೆಯಲಿ
ಒತ್ತಾಯಕ್ಕೆ ದುಡಿದವರೇ
ಹೊಲಗದ್ದೆಯಲಿ ಕಾಡು ಮೇಡಲಿ
ಕುಡುಗೋಲು ಹಿಡಿದು ದುಡಿದವರೇ
ದೂರದಿ ಮಕ್ಕಳ ಆಟವ ನೋಡಿ ಚಂಚಲರಾಗಿ ಬಿದ್ದವರೇ.........
ಹೆದರದಿರಿ ನಿಮ್ಮೊಡನೆ ನಾವು ಇದ್ದೇವೆ

ತೋಳು ಕೈಗಳು ಬೆಳೆಯುವ ಮುನ್ನ
ಯಂತ್ರಗಳೊಂದಿಗೆ ದುಡಿದವರೇ
ಯಂತ್ರಗಳೊಂದಿಗೆ ಯಂತ್ರಗಳಾಗಿ ಜೀವವ ತೇದವರೇ
ಹಣ ಮಾಡುವ ಆ ದುಷ್ಟರ ಸಂಚಿಗೆ ಬಲಿಯಾಗಿ ಹೋದವರೇ
ಹೆದರದಿರಿ ನಿಮ್ಮೊಡನೆ ನಾವು ಇದ್ದೇವೆ

ಶಿವಕಾಶಿಯ ಸುಡುಮದ್ದಿನ ಮನೆಯಲಿ
ನಿಮ್ಮ ಬಾಲ್ಯವ ಕಳೆದವರೇ
ಹಣವಂತರ ಆ ಹೋಟೆಲುಗಳಲಿ
ಕಸ ಮುಸುರೆಯನು ಗೈದವರೇ
ಸಿಡಿಯುವ ನೋಯುವ ಕಾಯಿಲೆ ಪಡೆದು ನೋವಲಿ ಅತ್ತವರೇ
ಹೆದರದಿರಿ ನಿಮ್ಮೊಡನೆ ನಾವು ಇದ್ದೇವೆ

(ಧ್ವನಿಸುರುಳಿ - ಅರಳದ ಮೊಗ್ಗುಗಳು, ಬೀದಿಚಿಣ್ಣರ ಕಾಲ್ನಡಿಗೆ ಜಾಥಾ, ಮೈಸೂರು 1995)

## ತೂರಬೇಡಿ ಗಾಳಿಗೆ

-ವಿಜಯಾ ದಬ್ಬೆ

ತೂರಬೇಡಿ ಗಾಳಿಗೆ ಹೆಣ್ತನದಾ ಘನತೆಯಾ
ಜೀವ ಕೊಡುವ ಜೀವವಿದು ಕಡಿಮೆ ಯಾರಿಗೆ ( 2 ಸಲ)
ಕಡಿಮೆ ಯಾರಿಗೆ ಕಡಿಮೆ ಯಾರಿಗೆ

ನಾಚಬೇಡಿ ಹೆಣ್ತನಕೆ ತಲೆ ಎತ್ತಿ ನಿಲ್ಲಿರಿ
ನಾಚಬೇಕು ತುಳಿವವರು ಮನು ಜಾತಿಗೆ ಸೇರಿದವರು

ಕತ್ತಲೆ ಏಕಾಂತದಲ್ಲಿ ಕಣ್ಣಹನಿ ಸಾಕವ್ವಾ
ಸಾಕವ್ವಾ ಸಾಕವ್ವ
ಬೆಳಕಿಗೊಮ್ಮೆ ಈಚೆ ಬಾ
ಕಂಡೀತು ಜೀವನ
ಬೆಳಕಿಗೊಮ್ಮೆ ಈಚೆ ಬಾ ಕಂಡೀತು ಜೀವನ ॥

ನಾನು ನೀನು ಅವಳು ಇವಳು ಹೆಣ್ಣಾಗಿ ನೊಂದವರು
ನೊಂದವರು ನಾವು ನೊಂದವರು ॥
ಕೈಗೆ ಕೈ ಕೂಡಿಸವ್ವ ಹೊಸ ಜಗತ್ತು ನಮ್ಮದು
ಹೊಸ ಜಗತ್ತು ನಮ್ಮದು ಹೊಸ ಜಗತ್ತು ನಮ್ಮದು
ಹೊಸ ಜಗತ್ತು ನಮ್ಮದು ಹೊಸ ಜಗತ್ತು ನಮ್ಮದು

## ಜನಧ್ವನಿ

*- ಜನಾರ್ದನ ಕೆಸರಗದ್ದೆ*

ಬಂತೋ ಬಂತೋ ಜನಧ್ವನಿ
ಬಂತೋ ಬಂತೋ ಜನರ ದನಿ ॥ಬಂತೋ॥

ನಮ್ಮದಲ್ಲ ಇದು ನಿಮ್ಮ ದನಿ
ನಿಮ್ಮೊಳಗಿರುವ ನಮ್ಮ ದನಿ ॥ಬಂತೋ॥

ಬರಿದನಿಯಲ್ಲ ನೋವಿನ ಕೂಗೋ
ಸಮಾನತೆಗಾಗಿ ತುಡಿವ ದನಿ ॥ಬಂತೋ॥

ಬರಿದನಿಯಲ್ಲ ಸಿಡಿಲಿನ ಸದ್ದೋ
ನೂರು ಕನಸುಗಳ ಹೊತ್ತ ದನಿ ॥ಬಂತೋ॥

ಕೈಗೇ ಕೈಯ ಕೂಡಿಸಿರಿ
ಧ್ವನಿಗೆ ಧ್ವನಿಯ ಸೇರಿಸಿರಿ ॥ಬಂತೋ॥

(ಜನಧ್ವನಿ ವೇದಿಕೆ - ಸಾಲು ಮರ ಉಳಿಸಿ
ಸೈಕಲ್ ಜಾಥಾ ನವೆಂಬರ್ 22, 1999)

# ಸಿಂಹದಂತೆ ಸಿಡಿದು ಬನ್ನಿ

ಸಿಂಹದಂತೆ ಸಿಡಿದು ಬನ್ನಿ
ಹುಲಿಯಂತೆ ಜಿಗಿದು ಬನ್ನಿ
ಹೋರಾಟದ ಸಾಗರಕೆ
ನಾರಿಯರೆ ನಗುತ ಬನ್ನಿ ॥ಸಿಂಹದಂತೆ॥

ಒನಕೆ ಹಿಡಿದ ಓಬವ್ವಳ ವಾರಸರು ನೀವಮ್ಮ
ವೀರನಾರಿಯರ ಒಡಲ ಧೀರ ನಾರಿಯರೆ ನೀವು
ಧೈರ್ಯದಿಂದ ಮುಂದೆ ಬನ್ನಿ
ದಂಡಿನಲಿ ಸೇರ ಬನ್ನಿ ॥ಸಿಂಹದಂತೆ॥

ಕಿತ್ತೂರ ಚೆನ್ನಮ್ಮನ ಕತ್ತಿಯೇ ನೀವಮ್ಮ
ವೀರನಾರಿಯರ ಒಡಲ ಧೀರ ನಾರಿಯರೆ ನೀವು
ಧೈರ್ಯದಿಂದ ಮುಂದೆ ಬನ್ನಿ
ದಂಡಿನಲಿ ಸೇರ ಬನ್ನಿ ॥ಸಿಂಹದಂತೆ॥

ಝಾನ್ಸಿರಾಣಿ ಲಕ್ಷ್ಮೀಬಾಯಿ ಜನಿಸಿದ ಈ ನಾಡಮ್ಮ
ವೀರನಾರಿಯರ ಒಡಲ ಧೀರ ನಾರಿಯರೆ ನೀವು
ಧೈರ್ಯದಿಂದ ಮುಂದೆ ಬನ್ನಿ ದಂಡಿನಲಿ ಸೇರ ಬನ್ನಿ ॥ಸಿಂಹದಂತೆ॥

ಬೆಳವಡಿ ಮಲ್ಲಮ್ಮನ ಬಳಗವೇ ನೀವಮ್ಮ
ವೀರ ನಾರಿಯರ ಒಡಲ ಧೀರನಾರಿಯರೆ ನೀವು
ಧೈರ್ಯದಿಂದ ಮುಂದೆ ಬನ್ನಿ
ದಂಡಿನಲಿ ಸೇರ ಬನ್ನಿ ॥ಸಿಂಹದಂತೆ॥





# ನಾವು ಜಿಪುಣರು

*- ಜನಾರ್ದನ ಕೆಸರಗದ್ದೆ*

ನಾವು ಜಿಪುಣರೋ... ನಮ್ಮದು ಜಿಪುಣರ ಸಂಘ
''ರೀ, ಬೇರೆಯವರಿಗೆ ತೊಂದರೆ ಕೊಡದೆ ಸರಳ ಜೀವನ ನಡೆಸೋಣ
ಅಂದ್ರೆ ನಮ್ಮನ್ನು ಜಿಪುಣರು ಅಂತೀರಲ್ರೀ.............ಹಾ
ಪರವಾಗಿಲ್ಲ.........ಅನ್ನಿ''
ನಾವು ಜಿಪುಣರು ನಮ್ಮದು ಜಿಪುಣರ ಸಂಘ ॥

ಪರಿಸರ ನಾಶ ಮಾಡಿ ಹುಟ್ಟಿದ
ನೈಲಾನ್ ರೇಯಾನ್ ಬಟ್ಟೆಯು ಬೇಡ
ವಿಷ ವಸ್ತುಗಳನು ಹಾಕಿ ಮಾಡಿದ ಬಣ್ಣದ ಬಿಳಿಯ ಬಟ್ಟೆಯು ಬೇಡ
ಮೀಟರಿಗೆ ಇಪ್ಪತ್ತು ರೂಪಾಯಿ ಕೊಟ್ಟು
ಕೈಯಲಿ ಮಾಡಿದ ಬಟ್ಟೆಯ ತೊಟ್ಟು
ನಿಮಗಿಂತಲು ನಾವು ಸುಖ ಪಡುವವರು ॥ನಾವು॥

ಚಾಕ್ಲೆಟ್ ಚಿಕ್ಲೆಟ್ ತಿನ್ನುವುದಿಲ್ಲ ಪೆಪ್ಸಿ ಗಿಪ್ಸಿ ಕುಡಿಯುವುದಿಲ್ಲ
ಕೆಂಟಕಿ ಫ್ರೈಡು ಚಿಕನ್ನು ಬೇಡ ತಿಂದರೆ ಬರುವ ಖಾಯಿಲೆ ಬೇಡ
ರಾಗಿ ಮುದ್ದೆ ಸೊಪ್ಪು ಸಾರು ತಿಂದರೆ ನಮಗೆ ಎದುರು ಯಾರು
ನಿಮಗಿಂತಲು ನಾವು ಶಕ್ತಿವಂತರು ॥ನಾವು॥

ದುಡಿದು ಉಣ್ಣುತ್ತೇವೆ ದುಡಿಸುವುದಿಲ್ಲ
ದುಡ್ಡೇ ನಮಗೆ ಸರ್ವಸ್ವ ಅಲ್ಲ
ಫೈವ್ ಸ್ಟಾರ್ ಹೋಟೇಲು ಬಂಗಲೆಗಳಲ್ಲಿ
ದುಡ್ಡು ಸಮಯ ಕಳೆಯುವುದಿಲ್ಲ
ದುಡ್ಡು ಮಾಡುವ ನೆಪದಲಿ ನೀವು
ಮಾನವೀಯತೆಯ ಮರೆಯುವಿರಲ್ಲ
ನಿಮಗಿಂತಲು ನಾವು ಮಾನವೀಯರು ॥ನಾವು॥

ಕ್ರಿಕೆಟ್ ಆಡಿಸಿ ಸಿನೆಮ ತೋರಿಸಿ
ಜಾಹಿರಾತುಗಳ ಮಾಡುವಿರಲ್ಲ
ಸುಂದರ ಹುಡುಗಿಯರ ದೇಹವ ತೋರಿಸಿ
ನಿಮ್ಮ ವಸ್ತುಗಳ ಮಾರುವಿರಲ್ಲ
ಮಾನ ಮರ್ಯಾದೆ ಎಲ್ಲ ಬಿಟ್ಟು
ಬಡವರ ದುಡ್ಡು ದೋಚುವಿರಲ್ಲ
ನಿಮಗಿಂತಲು ನಾವು ಮಾನವಂತರು ॥ನಾವು॥

# ನಾವೆಲ್ಲ ಒಂದೇ

ಭಾರತ ಮಣ್ಣಲ್ಲಿ ದುಡಿಯುವ ನಾವೆಲ್ಲಾ
ಒಂದೇ ಒಂದೇ ಒಂದೇ
ನಮ್ಮ ಭಾರತ ತಾಯಿಯ ಮಕ್ಕಳು ನಾವೆಲ್ಲ
ಎಂದಿಗು ಒಂದೇ ಒಂದೇ ॥ಭಾರತ॥

ಉತ್ತರ ದಕ್ಷಿಣ ಭೇದವಿಲ್ಲ ಎಂಬ ಭೇದವಿಲ್ಲ
ಹಿಂದು ಮುಸ್ಲಿಂ ಕ್ರೈಸ್ತ ಭೇದವಿಲ್ಲ
ಹಿಂದಿ ಕೊಂಕಣಿ ಕನ್ನಡ ಮಲಯಾಳ
ತಮಿಳು ತುಳು ಎಂಬ ಭೇದವಿಲ್ಲ ॥ಭಾರತ॥

ಅರ್ಧ ನಗ್ನರಿಗೇನು ವಸ್ತ್ರ ಭೇದ ಏನು ವಸ್ತ್ರ ಭೇದ
ನಿರ್ಗತಿಕರಿಗೇನುಂಟು ಅನ್ನ ಭೇದ
ಗೋಧಿಯ ನಾಡಿದು ರಾಗಿಯ ನಾಡಿದು
ತೆಂಗಿನ ನಾಡೆಂಬ ಭೇದವಿಲ್ಲ ॥ಭಾರತ॥

ಯಾರು ಯಾರಿಗು ಅನ್ಯರಲ್ಲ ಇಲ್ಲಿ ಅನ್ಯರಲ್ಲ
ಯಾರು ಯಾರಿಗು ಗುಲಾಮರಲ್ಲ
ಒಡೆಯರು ನಾವು ಗುಲಾಮರು ನೀವು
ಎಂಬ ವ್ಯವಸ್ಥೆಯ ಕೊನೆಗಾಣಿಸುವ ॥ಭಾರತ॥

# ಬೆಲ್ಚಿಯ ಹಾಡು

*-ಡಾ.ಸಿದ್ಧಲಿಂಗಯ್ಯ*

ದೊಡ್ಡ ಗೌಡರ ಬಾಗಿಲಿಗೆ
ನಮ್ಮ ಮೂಳೆಯ ತೋರಣ
ನಮ್ಮ ಜನಗಳ ಕಾಲು ಕಯ್ಯಿ
ಕಂಬ ಅವರ ಹಟ್ಟಿಗೆ ॥ ಪ ॥

ಅವರ ಬೇಟೆಗೆ ನಾವು ಮೊಲಗಳು
ನಮ್ಮ ಬಾಳೇ ಬಂಗಲೆ
ಅವರ ಬಂಗಲೆಯಂಗಳಕ್ಕೆ
ನಮ್ಮ ರಕ್ತದ ರಂಗೋಲೆ ॥ ಪ ॥

ಅವರ ತೋಟದ ತೆಂಗಿನಲ್ಲಿ
ನಮ್ಮ ರಕ್ತದ ಎಳನೀರು
ಅವರ ಅಮಲಿನ ಗುಂಗಿನಲ್ಲಿ
ಕೂಲಿ ಹೆಣ್ಗಳ ಕಣ್ಣೀರು ॥ ಪ ॥

ಯಾವ ಪಾಪವ ಮಾಡಲಿಲ್ಲ
ಯಾರ ತಲೆಯನು ಒಡೆಯಲಿಲ್ಲ
ಕರಗಿ ನಮ್ಮಯ ಬಾಳ ಕತ್ತಲೆ
ಕಾಣಲಾರದೆ ಹಗಲನು ॥ಪ॥

(25 ವರ್ಷಗಳ ಹಿಂದೆ ಬಿಹಾರದ ಬೆಲ್ಚಿ ಎಂಬ ಹಳ್ಳಿಯಲ್ಲಿ ಶ್ರೀಮಂತ ಜಮೀನ್ದಾರರಿಂದ ದಲಿತರ ಸಾಮೂಹಿಕ ಹತ್ಯಾಕಾಂಡವಾದ ಸಂದರ್ಭದ ಹಾಡು )

# ಕರ್ಮ ಭೂಮಿಯಲಿ ಅರಳಿದ ಓ ಹೂವೇ

ಕರ್ಮ ಭೂಮಿಯಲಿ ಅರಳಿದ ಓ ಹೂವೇ ।
ಅರಳಿ ಅರಳದ ಓ ಕಿರುನಗೆಯೇ
ಕಣ್ಣ ನಕಸುಗಳು ಕಮರಿ ಹೋಗಲು ।
ಹಣದ ದಾಹಕೆ ಉರಿದು ಹೋದೆಯಾ ॥
ಯಜ್ಞದ ಬೆಂಕಿ ಆರಲೇ ಇಲ್ಲ । ಹಸಿರು ತೋರಣ ಬಾಡಲಿ ಇಲ್ಲ ।
ಮದುವೆ ಚಪ್ಪರ ಬಿಚ್ಚಲೆ ಇಲ್ಲ । ನೆಂಟರಿನ್ನು ಮನೆ ತಲುಪಲೇ ಇಲ್ಲ ।
ಮಂಗಳ ವಾದ್ಯ ಮರೆಯಾಗಿಲ್ಲ । ಮನೆದುಂಬುವುದು ನಡೆಯಲೆ ಇಲ್ಲ ।
ಜುಳು ಜುಳು ಹರಿವ ನಿರ್ಮಲ ನೀರೆ । ಮದುಮಗಳಾಗಿ ಹಸೆಮಣೆ ಏರಿ ।
ಮಸಣದ ಭೂಮಿ ಬಾಳುವೆಗೆ ಹೋದೆಯಾ ॥ ಕರ್ಮ ॥
ಮಾನವೀಯತೆ ದಹಿಸಿ ಹೋಯಿತೆ । ಮಮತೆಗೆ ಅರ್ಥ ಇಲ್ಲವಾಯಿತೆ ।
ವೇದಗೋಷ್ಠಿಗಳು ಅಣಕವಾಡಿತೆ । ಆಣೆ ಭಾಷೆ ಪರಿಹಾಸ್ಯಮಾಡಿತೆ ।
ಪ್ರೇಮ ಬಂಧನದ ಮಂಗಳ ತಾಳಿ। ಕೊರಳನು ಬಿಗಿವ ಹಗ್ಗವಾಯಿತೆ ।
ಹುಣ್ಣಿಮೆ ದಿನ ಹಾಲ್ಚೆಲ್ಲುವ ನಗೆಯೆ । ಕಾರ್ಮೋಡಗಳು ಕವಿದುಕೊಂಡವೇ।
ಕತ್ತಲೆ ಚಿತೆಯಲಿ ಶವವೇ ಆದೆಯಾ ॥ ಕರ್ಮ ॥
ರಾಕ್ಷಸ ಮೌಲ್ಯ ರಾಜ್ಯವಾಳುವ । ನರಕದಂತ ಈ ಸಮಾಜದಲ್ಲಿ ।
ಮನುಜರ ನಡುವಿನ ಬಂಧಗಳೆಲ್ಲ । ಮಾರುಕಟ್ಟೆಯಾ ಮಾಲುಗಳಾದವೇ।
ಹೆಣ್ಣು ಮಕ್ಕಳೆ ಶತ್ರುಗಳಾದರೆ । ಅತ್ತೆಯ ಕಣ್ಣು ಕೆಂಡಕಾರಿದವೆ ।
ಕಳ ಕಳ ಎನ್ನುವ ಓ ನವ ವಧುವೆ ।
ಶಿಶಿರದ ಬೆಂಕಿ ನಿನ್ನಾ ದಹಿಸಿತೆ ॥ ಕರ್ಮ ॥
ಯಾರ ಬರುವಿಗೆ ಎದುರು ನೋಡುವೆ । ಏನು ರಕ್ಷಣೆಗೆ ನೀನು ಕಾಯುವೆ।
ವಿಷವ ಕೊಟ್ಟಾರು ಬೆಂಕಿಯ ನೀವರು । ಹುರುಳು ಹಗ್ಗವಾ ಬಿಗಿದುಕೊಂಡಾರು।
ಯಾವ ಡಾಕ್ಟರು ಸಾಕ್ಷಿಗೆ ನಿಲ್ಲರು । ಕೋರ್ಟಲು ನಿನಗೆ ಬೆಂಬಲ ನೀಡರು।
ಶಾಸನ ಕೋರ್ಟು ಕಛೇರಿಯೆಲ್ಲ । ಕನ್ನಡೆಯೊಳಗಿನ ಕನಸಿನ ಗಂಟೆ ।
ಸಾಮಾನ್ಯರಿಗೆ ಸಿಗುವ ಸಿರಿಯಲ್ಲ ॥ ಕರ್ಮ ॥
ಅಕ್ಕಂದಿರೆ ಓ ತಂಗಿಯಂದಿರೆ । ವ್ಯವಸ್ಥೆ ತುಳಿದಾ ಅಬಲೆಯಂದಿರೆ ।
ಬೇಯುವ ಎದೆಗಳ ಕಮರುವಾಸನೆಗೆ । ಕಣ್ಣೀರಿನ ಜಲಧಾರೆ ಹರಿದವೆ ।
ಹಾದಿಯುದ್ದಕು ಹೆಣಗಳ ರಾಶಿ । ಗುಂಡಿಗೆ ಗಾಯ ಕಲಕುತ್ತಿವೆಯೇ ।
ರಾಕ್ಷಸ ಪೀಡನೆ ಎದುರಿಸಬೇಕು । ಸ್ತ್ರೀಯರು ಪುರುಷರು ಮನುಜರೆಲ್ಲರೂ ।
ಸಮಾನರಾಗಿ ಬಾಳಲೇಬೇಕಮ್ಮ ॥
ಕರ್ಮ ಭೂಮಿಯಲಿ ಅರಳಿದ ಓ ಹೂವೇ । ಅರಳಿ ಅರಳದ ಓ ಕಿರುನಗೆಯೇ।
ಕಣ್ಣ ಮಬ್ಬಿನಲಿ ಹೂವುಗಳರಳಲು । ನೆತ್ತರು ಜ್ವಾಲೆಯ ಬಾವುಟವಾಗಲು ।
ಹೋರಾಟ ಕಣದಿ ಮುಂದಿರಬೇಕಮ್ಮಾ ॥

# ಬೆಟ್ಟಗಳ ಒಡೆದೆವು

- ಡಾ. ಸಿದ್ಧಲಿಂಗಯ್ಯ

ಬೆಟ್ಟಗಳ ಒಡೆದೆವು
ಬಂಡೆಗಳ ಹಿಂಡಿದೆವು
ನಮ್ಮ ರಕ್ತ ಜಲ್ಲಿ ಮಾಡಿ ಪ್ರಾಜೆಕ್ಟು ಕಟ್ಟಿದೆವು
ಸಿರಿಯು ಯಾರಿಗೋ ಶ್ರಮವು ಯಾರಿಗೋ

ನೇಗಿಲುಗಳ ಹೊತ್ತೆವು ಹೊಲಗಳೆಲ್ಲಾ ಉತ್ತೆವು
ನಮ್ಮ ಬೆವರ ನಾಲೆ ಮಾಡಿ ಗದ್ದೆಗಳಿಗೆ ಬಿಟ್ಟೆವು
ಬೆಳೆಯು ಯಾರಿಗೋ ಗಂಜಿ ಯಾರಿಗೋ

ಮಗ್ಗಗಳ ಹಿಡಿದೆವು
ನೂಲು ದಾರ ತೆಗೆದೆವು
ನಮ್ಮ ನರಗಳ ದಾರ ಮಾಡಿ
ಬಟ್ಟೆಗಳ ನೇಯ್ದೆವು
ಉಡುಪು ಯಾರಿಗೋ ಚಳಿ ಯಾರಿಗೋ

ಯಂತ್ರಗಳ ನಡೆಸಿದೆವು
ಉತ್ಪತ್ತಿಯ ಹೆಚ್ಚಿಸಿದೆವು
ನಮ್ಮ ಶಕ್ತಿ ಕರೆಂಟು ಮಾಡಿ
ಫಾಕ್ಟರಿಯ ನಡೆಸಿದೆವು
ಕಾರು ಯಾರಿಗೋ ಕಾಲ ನಡಿಗೆ ಯಾರಿಗೋ

ರೇಷ್ಮೆ ಮೊಟ್ಟೆ ತಂದೆವು
ಹುಳುಗಳನ್ನು ಸಾಕಿದೆವು
ರೇಷ್ಮೆ ದಾರ ತೆಗೆದವು
ಸೀರೆ ಪಂಚೆ ನೇಯ್ದೆವು
ತಳಕು ಯಾರಿಗೋ ಕೊಳಕು ಯಾರಿಗೋ

ಕಾರಣ ಗೊತ್ತಾಗಿದೆ
ಮುಂದೆ ದಾರಿ ತಿಳಿದಿದೆ
ಕ್ರಾಂತಿ ದಾರಿಯಲ್ಲಿ ಸಾಗಿ
ಹೊಸ ನಾಡ ಕಟ್ಟುವೆವು
ಹೋರಾಟ ನಮ್ಮದೋ
ಜಯ ನಮ್ಮದೋ

(ಧ್ವನಿಸುರುಳಿ - ನೆತ್ತರಲ್ಲಿ ನೆಂದ ಹೂ)

## ದೇಶ ದಿವಾಳಿ ಮಾಡ್ಯಾರೋ

*- ಸಮೂಹ ಸೃಷ್ಟಿ*

ದೇಶ ದಿವಾಳಿ ಮಾಡ್ಯಾರೋ ನಮ್ಮ ಪುಡಾರಿಗಳು
ಭಾರತ ಒತ್ತೆ ಇಟ್ಟರೋ ॥ದೇಶ॥

ಉದಾರೀಕರಣ ಅಂತಾರೋ
ಖಾಸಗೀಕರಣ ಮಾಡ್ತಾರೋ
ಆರ್ಥಿಕ ನೀತಿ ರೂಪಿಸಿಕೊಂಡು ನಮ್ಮ ದೇಶ ಒಯ್ದಾರೋ ॥ದೇಶ॥

ಸರ್ಕಾರಿ ಕೆಲಸ ದೇವರ ಕೆಲಸಂತ
ವಿಧಾನ ಸೌಧದ ಮೇಲೆ ಬರೆದಾರೋ
ಮಾಡುವುದೆಲ್ಲ ಭ್ರಷ್ಟಾಚಾರ ಚಾಕು ಚೂರಿ ದರ್ಬಾರೋ ॥ದೇಶ॥

ವಿದೇಶಿ ಸಾಲ ತರ್ತಾರೋ
ಬಡವರ ಉದ್ಧಾರ ಅಂತಾರೋ
ದೇಶದ ತುಂಬ ಹಗರಣ ನಡೆಸಿ ಜೈಲುಗಳನ್ನು ಸೇರ್‍ಯಾರೋ ॥ದೇಶ॥

ಕಡ್ಡಾಯ ಶಿಕ್ಷಣ ಅಂತಾರೋ
ವಯಸ್ಕರ ಶಿಕ್ಷಣ ತರ್ತಾರೋ
ದುಡಿಯುವ ಮಕ್ಕಳ ಮರೆತು ಇವರು ಕುರ್ಚಿಗಾಗಿ ಕಚ್ಚಾಡ್ತಾರೋ
॥ದೇಶ॥

## ಶುಭಾಕಾಂಕ್ಷೆ

*-ಜನಾರ್ದನ ಕೆಸರಗದ್ದೆ*

ಅರಳು ಮಲ್ಲಿಗೆಯೇ । ಅರಳು ಸಂಪಿಗೆಯೇ ।
ಅರಳು ತಾವರೆಯೇ ನೀನು ಬೇಗ ।
ಹಾಡು ಕೋಗಿಲೆಯೇ । ಕುಣಿಯೋ ಓ ನವಿಲೆ
ಶುಭ ನುಡಿಯೇ ಶಕುನದಾ ಹಕ್ಕಿ ಈಗ ॥ಅರಳು॥

ಬೀಸು ತಣ್ಣನೆ ಗಾಳಿ । ನೆರವಾಗು ಓ ನೀರೆ ।
ಸುಡದರು ಬೆಂಕಿ ನಮ್ಮನೆಂದೂ ।
ಉಸಿರಾಡಿ ಪ್ರಾಣಿಗಳೆ । ನೆರಳೀವ ಮರಗಳೆ
ಹಸಿರಾಗಿ ನೀವು ಬೆಳೆಯಿರೆಂದು ॥ಅರಳು॥

ಕಾಲ ಕಾಲಕು ಮಳೆಯ । ಸುರಿಸು ನೀ ಮೋಡವೇ ।
ಎಂದೆಂದು ನಗುತಲಿರು ಓ ಚಂದ್ರನೆ ।
ಕಾಲದಾ ಪ್ರಜ್ಞೆಯನು । ತಿಳಿಸಲು ನೀನಿರುವೆ ।
ಎಂದೆಂದು ಹೊಳೆಯುತಿರು ಓ ಸೂರ್ಯನೆ ॥ಅರಳು॥

# ನಮ್ಮೂರ ಗುಡಿ

ನಮ್ಮೂರ ಗುಡಿಯನ್ನು ಯಾರು ಕಟ್ಟಿದರಣ್ಣಾ
ಕಟ್ಟಿದ ನಮ್ಮನ್ನೆಲ್ಲಾ ಹೊಲೆ ಮಾದಿಗರಂತಾರೆ ||ನಮ್ಮೂರ||

ನಮದಪ್ಪು ಬೆವರು ಸುರಿಸಿ
ಕಟ್ಟಿದೆವು ಆ ಗುಡಿಯಾ
ನಾವು ಕಟ್ಟಿದ ಗುಡಿಗೆ ನಾವ್ಯಾರು ಹೋಗಂಗಿಲ್ಲ ||ನಮ್ಮೂರ||

ಯಾಕಂತ ಕೇಳಿದರೆ ಕೀಳ್ಜಾತಿ ಅನ್ನುತಾರೆ
ಕೀಳ್ಜಾತಿ ನಾವೆಲ್ಲ ಮನುಷ್ಯರು ಅಲ್ಲವೇನು ||ನಮ್ಮೂರ||

ಆ ಗುಡಿಯ ಕಟ್ಟುವಾಗ ಹೊಲಸಂತು ಆಗಲಿಲ್ಲ
ನಾವು ಮುಟ್ಟಿದ ಮಾತ್ರಕೆ ಹೊಲಸಾಯ್ತು ಅಂತಾರೆ ||ನಮ್ಮೂರ||

ದಲಿತರು ನಾವೆಲ್ಲ ಬಡವರು ಅಲ್ಲವೇನು
ಬಡಜನರು ನಮ್ಮೊಳಗೆ ಕುಲಭೇದ ಯಾಕಣ್ಣಾ ||ನಮ್ಮೂರ||

ನಮ್ಮಣ್ಣ ಕುಡಿಯೋದು ನುಚ್ಚು ಅಕ್ಕಿಯ ಗಂಜಿ
ನುಚ್ಚು ಅಕ್ಕಿಯ ಗಂಜಿ ಹೊಟ್ಟೆ ತುಂಬೋದಿಲ್ಲ ||ನಮ್ಮೂರ||

ಹಸುವಿನ ಹಟ್ಟಿಯಲಿ ಹಗಲಿರುಳು ದುಡಿತಾನೆ
ಹಗಲಿರುಳು ದುಡಿದಾರು ಏನೇನು ಕಷ್ಟಗಳು ||ನಮ್ಮೂರ||

ಬೆನ್ನಿಂದೆ ಯಜಮಾನ ಹೆಡೆ ಎತ್ತಿದ ಹಾವು
ಹಾವಿನ ನೆರಳಲ್ಲಿ ಬದುಕೋದು ಹೇಗಣ್ಣಾ ||ನಮ್ಮೂರ||

ಈ ಬದುಕು ಹಿಂಗಾದ್ರೆ ಹಿಡಿಯಣ್ಣ ಕುಡುಗೋಲು
ಕುಡುಗೋಲು ಹಿಡಕೊಂಡು ಹೆಡೆಹಾವು ಕೊಲ್ಲೋಣ ||ನಮ್ಮೂರ||

ದಲಿತ ಸಂಘವ ಸೇರಿ ಹೋರಾಟ ಮಾಡೋಣ
ದಲಿತ ಸಂಘವ ಸೇರಿ ಹೋರಾಡಿ ಗೆಲ್ಲೋಣ ||ನಮ್ಮೂರ||

# ಕಟ್ಟುತ್ತೇವ ನಾವು

ಕಟ್ಟುತ್ತೇವ ನಾವು ಕಟ್ಟುತ್ತೇವ ನಾವು
ಕಟ್ಟಿ ಕಟ್ಟುತ್ತೇವ
ಒಡೆದ ಮನಸ್ಸುಗಳ ಕಂಡ ಕನಸುಗಳ
ಕಟ್ಟೇ ಕಟ್ಟುತ್ತೇವೆ
ನಾವು ಕನಸ ಕಟ್ಟುತ್ತೇವಾ
ನಾವು ಮನಸ ಕಟ್ಟುತ್ತೇವಾ ....

ಗೋಳಿಲ್ಲದ ಗುಂಡಿಲ್ಲದ ನಾಡ ಕಟ್ಟುತ್ತೇವಾ
ನೂರು ಕನಸ್ಸಿನ ಕೋಟಿ ಮನಸ್ಸಿನ
ಹಾಡ ಬರೆಯುತ್ತೇವಾ
ಈ ನೆಲದ ಹಾಡ ಬರೆಯುತ್ತೇವಾ ॥ಕಟ್ಟುತ್ತೇವಾ॥

ಜಾತಿ ಇಲ್ಲದ ಭೀತಿ ಇಲ್ಲದ
ನಾಡ ಕಟ್ಟುತ್ತೇವಾ
ಕುಲವಿಲ್ಲದ ಮನುಕುಲದ ಹೊಸ
ನಾಡ ಬರೆಯುತ್ತೇವಾ
ಈ ನೆಲದ ಹಾಡ ಬರೆಯುತ್ತೇವಾ ॥ಕಟ್ಟುತ್ತೇವಾ॥

ಕ್ರಾಂತಿ ಕೆಂಡದ ಕುಂಡ ಹೊತ್ತು ನಾವು
ಮುಳ್ಳ ತುಳಿಯುತ್ತೇವಾ
ನಮ್ಮ ಕಾಲಿನ ರಕ್ತ ಗಾಲಿನ
ಹಾಡ ಬರೆಯುತ್ತೇವಾ
ಈ ನೆಲದ ಹಾಡ ಬರೆಯುತ್ತೇವಾ ॥ಕಟ್ಟುತ್ತೇವಾ॥

# ಹೋಗುವೆನು ನಾ

- ಕುವೆಂಪು

ಹೋಗುವೆನು ನಾ ಹೋಗುವೆನು ನಾ ನನ್ನ
ಒಲುಮೆಯ ಗೂಡಿಗೆ
ಮಲೆಯ ನಾಡಿಗೆ ಮಳೆಯ ಬೀಡಿಗೆ ಸಿರಿಯ
ಚೆಲುವಿನ ರೂಡಿಗೆ ॥ಹೋಗು॥

ಅಲ್ಲಿ ತೆರೆತೆರೆಯದ್ರಿ ಪಂಕ್ತಿಗಳಲ್ಲೆ ಕಾಣದೆ ಹಬ್ಬಿವೆ
ನಿಬಿಡ ಕಾನನ ರಾಜಗಿರಿಗಳನಪ್ಪಿ ಸುತ್ತಲೂ ತಬ್ಬಿವೆ
ಮುಗಿಲನಂಡೆಲೆಯುತ್ತ ನಿಂತಿಹ ಧೀರಪರ್ವತಶೃಂಗಕೆ
ಹೋಗುವನು ನಾ ಹೋಗುವೆನು ನಾ.......

ಅಲ್ಲಿ ಇವೆ ಕಾಜಾಣ ಕೋಗಿಲೆ, ತೇನೆ
ಗಿಳಿ, ಕಾಮಳ್ಳಿಯು
ಕಂಪೆಸೆವ ಸೀತಾಳ, ಕೇದಿಗೆ ಬಕುಳ ಮಲ್ಲಿಗೆ ಬಳ್ಳಿಯು
ನೀಲಿ ಬಾನಲಿ ; ಹಸುರು ನೆಲದಲಿ; ಕಂಗಳೆರಡನೆ
ಬಲ್ಲವು :

ಅಲ್ಲಿ ಸಗ್ಗವೆ ಸೂರೆಹೋಗಿದೆ ; ನಂದನವೆ
ನಾಡೆಲ್ಲವು
ಹೋಗುವೆನು ನಾ ಹೋಗುವೆನು ನಾ.......... ನನ್ನ

# ಹೊಸ ಓದಿನಿಂದ ಲೋಕವೇ ಬದಲಾಯಿತು

ಗಂಗಮ್ಮಗೆ ಗುಡಿ ಕಟ್ಟಿಸಿ । ಮಾರಮ್ಮಗೆ ಹರಕೆ ಹೊತ್ತು
ಕೋಳಿ ಕುರಿ ಕುಯ್ವ ಯುಗ । ಹೊರಟು ಹೋಯಿತು
ಹೊಸ ಓದಿನಿಂದ ಲೋಕವೇ ಬದಲಾಯಿತು ॥ಹೊಸ॥

ಏಳು ಕುದುರೆ ರಥವೇರಿ । ಸೂರ್ಯ ಬರುವನೆಂದು ಹೇಳಿ ।
ಇಂದ್ರನೆಂಬನ್ಯಾವನೋ । ಮಳೆ ಸುರಿಸುವನೆಂದು ಹಾಡಿ
ನಂಬಿಸುವ ಹಾಳು ಕಾಲ । ತೀರಿ ಹೋಯಿತು
ಹೊಸ ಓದಿನಿಂದ ಜ್ಞಾನವೇ ತುಂಬಿ ತುಳಿಕಿತು ॥ಹೊಸ॥

ಮೋಡ ಮುಸುಕಿ ಮಿಂಚಿದಾಗ । ತಾತನ ಮಾತನ್ನೆ ನಂಬಿ
ಚಟೀರ್ ಎಂದು ಸಿಡಿಯಲು ಗುರು ಗಂಜಮ್ಮನ ನೆನೆದು
ಮೂಢನಂಬಿಕೆಗಳ ಕಾಲ । ಉರುಳಿ ಹೋಯಿತು ॥ಹೊಸ॥

ಶೂದ್ರ ಜನರು ಅಕ್ಷರಗಳ ನೋಡಬಾರದೆಂಬುದಳಿದು
ಹೆಣ್ಣು ಮಕ್ಕಳೋದಬಾರದೆಂಬ । ಮಾತು ದೂರ ಸರಿದು
ಪಂಚಾಂಗವೇ ದಿಕ್ಕಿಲ್ಲದೆ । ಹಾರಿ ಹೋಯಿತು
ಹೊಸ ಓದಿನಿಂದ ವಂಚನೆಯು ಬಯಲಾಯಿತು ॥ಹೊಸ॥

ಎತ್ತಿನ ಕೊಂಬಿನ ಮೇಲೆ । ಲೋಕವಿದೆ ಎಂಬ ಮಾತು
ಆದಿಶೇಷನೆಡೆಯ ಮೇಲೆ । ಭೂಮಿ ನಿಂತ ಆ ಮಾತು
ಸದ್ದು ಅಡಗಿ ನಿಜ ಬಣ್ಣ ಗೊತ್ತಾಯಿತು
ಜ್ಞಾನ ಜ್ಯೋತಿ ಎಲ್ಲೆಲ್ಲು ಪ್ರಜ್ವಲಿಸಿತು ॥ಹೊಸ॥

# ಬಡವರ ಮಗಳು

- *ಗ್ಯಾರಂಟಿ ರಾಮಣ್ಣ*

ಬಂದು ನೋಡು ತಾಯಿ
ನಮ್ಮ ಬಡವರ ಮಗಳನ್ನು
ಅಳ್ತಾ ಕುಂತವ್ಳೆ ಮನೆಯೊಳಗೆ ಬಂದು
ನೋಡು ತಾಯಿ

ಒಪ್ಪತ್ತಿನೂಟವು
ಹಾಸಲು ಹರಕಲು ಚಾಪೆಯೂ
ಒಪ್ಪಂತ ಮನೆಗೆ ಕೊಡಲಿಲ್ಲ
ಬಂದು ನೋಡು ತಾಯಿ ॥

ದಿನವೆಲ್ಲಾ ದುಡಿದಾರೂ
ತಪ್ಪಾದು ವನವಾಸ
ಉಪವಾಸ ಬಿದ್ದವ್ರೆ ಮನೆಮಕ್ಕಳೆಲ್ಲ
ಬಂದು ನೋಡು ತಾಯಿ ॥

ರಾತ್ರೆಲ್ಲ ನಿದ್ದಿಲ್ದೆ ರಾಗೀಯ ಬೀಸ್ಯಾಳೆ
ಮುದ್ದೆ ಕಾಣದೆ ಮಲಗ್ಯವ್ಳೆ
ಬಂದು ನೋಡು ತಾಯಿ

ಕುಡುಕ ಗಂಡನ ಕೂಡಿ
ಕೂಲಿಯ ಮಾಡ್ಯಾವಳೆ
ಕೂಳು ಕಾಣದೆ ಮಲಗವಳೆ
ಬಂದು ನೋಡು ತಾಯಿ

(ಧ್ವನಿಸುರುಳಿ - ವಿಮೋಚನೆ)

# ಹಳ್ಳಿಗಾಡ ಹಸುಗೂಸೆ

*- ಕೋಟಗಾನಹಳ್ಳಿ ರಾಮಯ್ಯ*

ಹಳ್ಳಿಗಾಡ ಹಸುಗೂಸೆ ಹಸುಕಾಯೋ ಧೀರ ಬಾಲನೆ
ಶಾಲೆ ಮರೆತು ದಿನವೆಷ್ಟಾಯಿತೋ । ಓ ಹಾಲುಗೆನ್ನೆಯ
ಜೀತಗಾರ ಜೀತ ಸೇರಿ ದಿನವೆಷ್ಟಾಯಿತೋ ॥ ಪ ॥

ಸಾಲು ಸಾಲದ ಚಿಂದಿ ಅಂಗಿ ಬೀಸುಗಾಳಿಗೆ ಪಕ್ಕ ಸರಿದು
ಚಳಿಗಾಳಿಗೆ ಬೆನ್ನು ಕೊಟ್ಟೆಯಾ । ಓ ಹಾಲುಗೆನ್ನೆಯ
ಜೀತಗಾರ ಚಳಿಗೆ ನೀನು ಮುದುರಿ ನಿಂತೆಯಾ ॥ ಪ ॥

ಅಡವಿಳೊಗಣ ದುಷ್ಟ ಪ್ರಾಣಿಗಳು ಹಿಂಡುಗಟ್ಟಿ ಹಿಂದೆ ಬೀಳಲು
ಓಡಲಾರದೆ ಎಡವಿ ಬಿದ್ದೆಯಾ । ಓ ಹಾಲುಗೆನ್ನೆಯ
ಜೀತಗಾರ ನೆತ್ತರು ಚಿಮ್ಮಿ ನೆಲಕೆ ಹರಿಯಿತೇ ॥ ಪ ॥

ನಿನ್ನ ದುಡಿಮೆ ಬೆಟ್ಟ ಗಾತ್ರ ದಕ್ಕುವುದು ಸ್ವಲ್ಪ ಮಾತ್ರ
ಹೊಟ್ಟೆ ಬಟ್ಟೆಗೂ ಸಾಲದಾಯಿತಲ್ಲೊ । ಓ ಹಾಲುಗೆನ್ನೆಯ
ಜೀತಗಾರ ಕಡು ದುಃಖದಿ ನೆಲವ ಹಿಡಿದೆಯಾ ॥ ಪ ॥

ಬರಡು ಮರದ ಬುಡದಿ ನೀನು ಎರಡು ಕೈಯಿಂದ ಮೋರೆ ಮುಚ್ಚಿ
ಬಿಕ್ಕಿ ಬಿಕ್ಕಿ ಅಳುತಲಿರುವೆಯಾ । ಓ ಹಾಲುಗೆನ್ನೆಯ
ಜೀತಗಾರ ಕಣ್ಣ ನೀರು ಕಾಲುವೆಯಾಯಿತೇ ॥ ಪ ॥

ಅತ್ತರೆ ನಿನ್ನ ಕಷ್ಟ ತೀರದು ಗೋಳಾಡಿದರೆ ಏನೇನೂ ಆಗದು
ಈಗಲು ಕಲಿಯಲು ಕಾಲ ಮಿಂಚಿಲ್ಲ । ಓ ಹಾಲುಗೆನ್ನೆಯ
ಜೀತಗಾರ ಓದು-ಬರಹ ಕಲಿಯಬಾರಯ್ಯ
ನಮ್ಮ ರಕ್ತದ ರಂಗೋಲೆ ॥ ಪ ॥

# ನಾಮಾಟ

*- ದಲಿತ ಮಹಿಳಾ ಚಳುವಳಿ*

ನಾಮಾಟ ವಿನರಂಡಿ ಅಮ್ಮಲ್ಲಾರಾ ಅಕ್ಕಲ್ಲಾರಾ
ನಿಜಮಂಡಿ ನಮ್ಮಂಡಿ ಅಯ್ಯಲ್ಲಾರಾ ಅನ್ನಲ್ಲಾರಾ
ಕುಲವುತ್ತುಲು ವೇರೈನ ಶ್ರಮ ಶಕ್ತಿ ಒಕಟೇಲಾ
ಏ ಒಕ್ಕುಡು ಲೇಕುನ್ನ ಮನಬ್ರದುಕುಲು ಸಾಗವುರಾ ॥ ನಾಮಾಟ ॥

ಒರೈ ಒರೈ ಅಂಟಾರು ಎಂದುಕು
ರಾರಾ ಪೋರಂಟಾರು ಎಂದುಕು ॥ 2 ॥
ದೂರಂ ಜರುಗಂಟಾರು । ನೀಚಂಗ ಚೂಸ್ತಾರು ॥ 2 ॥
ಮನಲಾಗ ಮನಷ್ಯೇರಾ । ಮನತೋಟಿ ವಾಡೇರಾ ॥
ಪ್ರತಿ ಮನಿಷಿನಿ ಗೌರವಿಂಚೀ ಜೀವಿಂಚಿ ಚೂಡರ ॥ ನಾಮಾಟ ॥

ಚಪ್ಪುಲು ಕುಟ್ಟೇಟೋಡು ಎವ್ವಡು
ನಾಗಲ ಪಟ್ಟೇಟೋಡು ಎವ್ವಡು ॥ 2 ॥
ಬರುವುಲು ಎತ್ತೇವಾಡು । ಮೂಟಲು ಮೋಸೇವಾಡು ॥ 2 ॥
ಮನಲಾಗ ಮನಷ್ಯೇರಾ । ಮನತೋಡಿ ವಾಡೇರಾ ॥
ಪ್ರತಿ ಮನಿಷಿನಿ ಗೌರವಿಂಚೀ ಜೀವಿಂಚಿ ಚೂಡರ ॥ ನಾಮಾಟ ॥

# ಅತ್ತಿತ್ತ ನೋಡದಿರು

- ಕೆ.ಎಸ್. ನರಸಿಂಹಸ್ವಾಮಿ

ಅತ್ತಿತ್ತ ನೋಡದಿರು
ಅತ್ತು ಹೊರಳಾಡದಿರು
ನಿದ್ದೆ ಬರುವಳು ಹೊದ್ದು ಮಲಗು ಮಗುವೆ
ಜೋ.....ಜೋ.....ಜೋ.......ಜೋ..
ಸುತ್ತಿ ಹೊರಳಾಡದಿರು
ಮತ್ತೆ ಹಠಹೂಡದಿರು
ನಿದ್ದೆ ಬರುವಳು ಮತ್ತೆ ಮಲಗು ಮಗುವೆ
ಜೋ.....ಜೋ.......ಜೋ.....ಜೋ..

ಮಲಗು ಚೆಲ್ಲಿನ ತೆರೆಯೇ
ಮಲಗು ಒಲ್ಮೆಯ ಸಿರಿಯೇ
ಮಲಗು ತೊಟ್ಟಿಲ ಸಿರಿಯೇ ದೇವರಂತೆ
ಮಲಗು ಮುದ್ದಿನ ಗಿಣಿಯೇ
ಮಲಗು ಮುತ್ತಿನ ಮಣಿಯೇ
ಮಲಗು ಚಂದಿರನೂರ ಹೂಗುವೆಯಂತೇ || ಅತ್ತಿತ್ತ ||

ತಾರೆಗಳ ಜರತಾರಿ
ಅಂಗಿ ತೊಡಿಸುವರಂತೆ
ಚಂದಿರನ ತಂಗಿಯರು ನಿನ್ನ ಕರೆದು
ಹೂವ ಮುಡಿಸುವರಂತೆ
ಸಾಲ ಕುಡಿಸುವರಂತೆ
ವೀಣೆ ನುಡಿಸುವರಂತೆ ಸುತ್ತ ನೆರೆದು || ಅತ್ತಿತ್ತ ||

ಬಣ್ಣ ಬಣ್ಣದ ಕನಸು
ಕರಗುವುದು ಬಲು ಬೇಗ
ಹಗಲು ಬರುವನು ಬೆಳ್ಳಿ ಮುಗಿಲ ನಡುವೆ
ಚಿನ್ನದಂಬಾರಿಯಲಿ
ನಿನ್ನ ಕಳುಹಿಸುವರಮ್ಮ
ಪಟ್ಟದಾನೆಯ ಮೇಲೆ ಪುಟ್ಟ ಮಗುವೆ || ಅತ್ತಿತ್ತ ||

(ಧ್ವನಿಸುರುಳಿ - ಭಾವ ಸಂಗಮ)

# ಓ ನನ್ನ ಚೇತನ

- ಕುವೆಂಪು

ಓ ನನ್ನ ಚೇತನ, ಆಗು ನೀ ಅನಿಕೇತನ
ರೂಪರೂಪಗಳನು ದಾಟಿ ನಾಮಕೋಟಿಗಳನು ಮೀಟಿ
ಎದೆಯೆ ಬಿರಿಯೆ ಭಾವದೀಟಿ
ಓ ನನ್ನ ಚೇತನ ಆಗು ನೀ ಅನಿಕೇತನ

ನೂರು ಮತದ ಹೊಟ್ಟ ತೂರಿ
ಎಲ್ಲ ತತ್ತ್ವದೆಲ್ಲೆ ಮೀರಿ ನಿರ್ದಿಗಂತವಾಗಿ ಏರಿ
ಓ ನನ್ನ ಚೇತನ, ಆಗು ನೀ ಅನಿಕೇತನ

ಎಲ್ಲಿಯೂ ನಿಲ್ಲದಿರು ಮನೆಯನೆಂದೂ ಕಟ್ಟದಿರು
ಕೊನೆಯನೆಂದೂ ಮುಟ್ಟದಿರು
ಓ ಅನಂತವಾಗಿರು ಓ ನನ್ನ ಚೇತನ, ಆಗು ನೀ ಅನಿಕೇತನ

ಅನಂತ ತಾನನಂತವಾಗಿ ಆಗುತಿಹನೆ ನಿತ್ಯಯೋಗಿ
ಅನಂತ ನೀ ಅನಂತವಾಗು : ಆಗು ಆಗು ಆಗು ಆಗು
ಓ ನನ್ನ ಚೇತನ, ಆಗು ನೀ ಅನಿಕೇತನ

(ಧ್ವನಿಸುರುಳಿ - ಅನಿಕೇತನ)

ಈ ಹಾಡುಗಳು ಕೇಳುಗರ ಕಿವಿಯಲ್ಲಿ ನಿಲ್ಲುವ ಅಲ್ಪ ಸಂತೋಷಿಗಳಲ್ಲ. ಕಿವಿಯಿಂದ ಕರುಳಿಗೆ ಬಂದು ಕರುಳಿಂದ ಕಣ್ಣಿಗೆ ಬಂದು ನಮ್ಮ ನಾಡಿನ ಬದುಕನ್ನ ಶ್ರಮ ಸಂಸ್ಕೃತಿಯ ಮೂಲದಿಂದ ನೋಡೋ ಹಾಗೆ ಮಾಡುವ ಎದೆಯಾಳದ ಹಾಡುಗಳು. ಹಾಗೆ ನೋಡಿದರೆ ನಮ್ಮ ಸಂಸ್ಕೃತಿಯ ಮೂಲ ಅಂದ್ರೆ ಶ್ರಮ. ಮನುಷ್ಯ ತನ್ನ ಶ್ರಮದ ಮೂಲಕ ನಿಸರ್ಗದ ಜೊತೆಗೆ ಹೋರಾಡುತ್ತಾ ಬೆಟ್ಟಗಳನ್ನು ಬದುಕಾಗಿಸಿಕೊಂಡ. ಗುಡ್ಡಗಳನ್ನು ಕಡಿದು ಹೊಲವಾಗಿಸಿಕೊಂಡ. ಅಡ್ಡ ದಿಡ್ಡಿ ಅಬ್ಬರಿಸುವ ನೀರಿಗೆ ಅಡ್ಡಗಟ್ಟಿ ಆಣೆಕಟ್ಟು ಅಂತ ಕರೆದು ತನಗೆ ಬೇಕಾದ ಹಾಗೆ ಬಳಸಿಕೊಂಡ. ಮುಗಿಲಿನ ಜೊತೆ ಮಾತಾಡ್ತಾ ನೇಗಿಲು ಹಿಡಿದುಕೊಂಡ. ಬೆವರುಹರಿಸಿ ಬೆಳಕಿನ ಬಾಗಿಲು ತೆಗೆದ. ಹೀಗೆ ಕತ್ತಲಿನಿಂದ ಬೆಳಕಿಗೆ ಬೆಳಕಿನಿಂದ ಕತ್ತಲಿಗೆ ಸೇತುವೆ ಕಟ್ಟಿ ಸಂಸ್ಕೃತಿಯನ್ನು ಸೃಷ್ಟಿ ಮಾಡ್ದ. ಆದರೆ ಊಳಿಗಮಾನ್ಯ ವ್ಯವಸ್ಥೆ ಹಾಗೂ ಬಂಡವಾಳಶಾಹಿ ವ್ಯವಸ್ಥೆಯ ವಕ್ತಾರರು ಶ್ರಮವನ್ನು ಸಂಸ್ಕೃತಿಯಿಂದ ಬೇರ್ಪಡಿಸಿದರು. ಹುಸಿ ಸಂಸ್ಕೃತಿಯ ಮಾದರಿಗಳನ್ನು ಮುಂದೆ ಮಾಡಿ, ನಿಜ ಅಂತ ನಂಬಿಸೋ ಕೆಲಸ ಮಾಡಿದರು. ಶತ ಶತಮಾನಗಳ ಈ ಸುಳ್ಳನ್ನು ನಮ್ಮ ಸೃಜನಶೀಲ ಸತ್ಯದ ಮೂಲಕ ಮೂಲೆಗೊತ್ತಿ ಮಾನವೀಯ ಮೌಲ್ಯಗಳನ್ನು ಹಾಡಾಗಿಸೋಣ.

*- ಬರಗೂರು ರಾಮಚಂದ್ರಪ್ಪ*

*(ನೆತ್ತರಲ್ಲಿ ನೆಂದ ಹೂ-ಧ್ವನಿ ಸುರುಳಿಯ ನಿರೂಪಣೆಯಲ್ಲಿ)*



Printed on Eco-friendly Paper
Cover Page : Handmade Jute Paper
Inside Pages : Baggasse Paper
(Contains a minimum of 80% Sugarcane Waste)

*ಹಾಡು ಹಬ್ಬ ಪ್ರತಿಗಳಿಗೆ ಸಂಪರ್ಕಿಸಿ :*

**ಜನಧ್ವನಿ ಯುವ ವೇದಿಕೆ**

*ಮಸೀದಿ ಎದುರು ರಸ್ತೆ, ಕುಂಬಾರಪೇಟೆ, ದೊಡ್ಡಬಳ್ಳಾಪುರ*

---

ಮುದ್ರಣ ವೆಚ್ಚಕ್ಕೆ **ರೂ.15/-** ಕೊಡುಗೆ ನೀಡಿ